ಶ್ರೀ. ಎ. ಎಸ್. ನಾವಡರಿಗೆ.
ಪ್ರೀತಿಪುರಸ್ಸರವಾಗಿ.
P. Subraya Bhat
23/

# ರವೀಂದ್ರನಾಥ ಠಾಗೋರ್


ಮಾರ್ಜರಿ ಸೈಕ್ಸ್

ವಿಶ್ವಭಾರತಿ ಕಲಾಶಾಲಾ ಅಧ್ಯಾಪಿಕೆ 1939–42

ಅನುವಾದಕರು

ಪಿ. ಸುಬ್ರಾಯ ಭಟ್, ವಿದ್ವಾನ್. ಬಿ.ಎ.,







ಓರಿಯಂಟ್ ಲಾಂಗ್‌ಮನ್ಸ್

36 A ಮೌಂಟ್ ರೋಡ್, ಮದ್ರಾಸ್-2.

ಬೊಂಬಾಯಿ ಕಲಕತ್ತಾ ನವದಿಲ್ಲಿ

ಓರಿಯಂಟ್ ಲಾಂಗ್‌ಮನ್ಸ್ ಪ್ರೈವೆಟ್ ಲಿಮಿಟೆಡ್
17 ಚಿತ್ತರಂಜನ್ ಎವೆನ್ಯು, ಕಲಕತ್ತ 13
ನಿಕೊಲ್ ರೋಡ್, ಬೆಲಾರ್ಡ್ ಎಸ್ಟೇಟ್, ಮುಂಬಯಿ 1
36ಎ, ಮೌಂಟ್ ರೋಡ್, ಮದ್ರಾಸ್ 2
ಕೇನ್‌ಸನ್ ಹೌಸ್, 24/1 ಅಸಫ್ ಅಲಿ ರೋಡ್, ನವಡಿಲ್ಲಿ 1
ಮೈನ್ ಗನ್‌ಫೌಂಡ್ರಿ ರೋಡ್, ಹೈದರಬಾದ್
17 ನಜಿಮುದ್ದಿನ್ ರೋಡ್, ಡಕ್ಕಾ

ಲಾಂಗ್‌ಮನ್ಸ್ ಗ್ರೀನ್ ಮತ್ತು ಕಂಪೆನಿ ಲಿಮಿಟೆಡ್
6 ಮತ್ತು 7 ಕ್ಲಿಫರ್ಡ್ ಸ್ಟ್ರೀಟ್, ಲಂಡನ್, ಡಬ್ಲ್ಯು. 1
ನ್ಯುಯೋರ್ಕ್. ಟೊರೋಂಟೊ, ಕೇಪ್‌ಟೌನ್ ಮತ್ತು ಮೆಲ್‌ಬೋರ್ನ್

The design for the cover, based on one of Rabindranath's drawings, was made by Ramendranath Chakravarty.



ಇಂಗ್ಲಿಷ್ ಮೊದಲನೆಯ ಮುದ್ರಣ 1943
ಕನ್ನಡ ,, ,, 1958



ಬೆಲೆ ರೂ. 1.60



PRINTED ON DOUBLE CROWN 28 lbs. PAPER OF INDIAN MANUFACTURE
AT THE BASEL MISSION PRESS, MANGALORE-1.

## FOREWORD TO THE ENGLISH EDITION

The purpose of this book is a very modest one. It lays no claim to scholarship or originality. It seeks only to present Rabindranath Tagore as a man, a thinker, and a poet, in such a way that the young student or general reader, without any specialist knowledge, can appreciate something of his greatness. If it succeeds in interesting such readers, and awaking in some a desire to know more, its aim will have been fulfilled. Even so, it could not have been written without the generous assistance and encouragement of many friends at Santiniketan, to whom, and especially to Mr. Rathindranath Tagore and to Dr. Amiya Chakravarty, I wish to acknowledge my debt. Without their unfailing interest and constructive criticism, its faults would have been much greater than they are.

MARJORIE SYKES

## ACKNOWLEDGMENTS

The publishers wish to thank Mr. Rathindranath Tagore and Visva-Bharathi, and Messrs. Macmillan & Co. Ltd., for their generous permission to quote extracts from those of the poet's works which are their copyright.

They also wish to thank the following for their help in finding, and their readiness in lending, the photographs from which the illustrations have been taken: Indira Debi Chaudhurani; Dr. Amiya Chakravarty; Mr. Kamakshi-Prasad Chatterjee; Mr. Kedar Nath Chatterjee; Mr. Amal Home; Mrs. Shanta Nag; Mr. Pulinbihari Sen and Visva-Bharathi; and Kumar Jitendra Pratap Singh.

# ಅನುಕ್ರಮಣಿಕೆ



# ಚಿತ್ರಪಟಗಳು



ಜೀವನದ ಕೊನೆಯ ವರ್ಷ, ರವೀಂದ್ರನು

## ಅಧ್ಯಾಯ ೧.

## ೧೮೬ ದಶಕದ ಶಿಶು

ಚಿತ್ಪೂರು ಮಾರ್ಗವು ಜೊರಸಾಂಕೋ ಜಿಲ್ಲೆಯ ಮೂಲಕ ದಕ್ಷಿಣದಿಂದ ಉತ್ತರಕ್ಕೆ ಜನನಿಬಿಡವಾದ ಕಲ್ಕತ್ತಾನಗರದ ಮಧ್ಯದಿಂದ ಹಾದುಹೋಗುತ್ತಿದೆ. ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿರುವ ಟ್ರಾಂ ಬಂಡಿಗಳ ಗಂಟೆಯ ಗಣಗಣ ನಿನಾದ, ಬಸ್ಸುಗಳ 'ಪೊಂ ಪೊಂ' ಶಬ್ದ, ಭಾರವಾದ ಹೊರೆಯನ್ನು ಹೇರಿರುವ ಗಾಡಿಗಳ ಮತ್ತು ಲಾರಿಗಳ ಚೀತ್ಕಾರ ಕೇಳಿಸುತ್ತಿದೆ. ಅಗಲಕಿರಿದಾದ ಮಾರ್ಗ ಗಳ ಇಕ್ಕಡೆಗಳಲ್ಲಿಯೂ ಸಾಲಾಗಿ ವಿವಿಧ ಅಂಗಡಿಗಳು—ಜವುಳಿ ಮಳಿಗೆಗಳು, ಟೋಪಿ ಅಂಗಡಿಗಳು, ಸಿಹಿತಿಂಡಿಯ ಅಂಗಡಿಗಳು ಕಂಗೊಳಿಸುತ್ತಿವೆ. ರಾಯ ಬೀದಿಯಲ್ಲಿಯೂ ಇಬ್ಬದಿಯ ಕಾಲುದಾರಿಗಳಲ್ಲಿಯೂ ರಾತ್ರಿಹಗಲೆನ್ನದೆ ಕಿಕ್ಕಿ ರಿದು ನೆರೆದ ಜನರ ನೂಕುನುಗ್ಗಲ ಗೊಂದಲ ಹೇಳಿತೀರದು. ಬೀದಿಯ ಒಂದು ಮೂಲೆಯಲ್ಲಿ ಸಂಗೀತ ಸಾಮಗ್ರಿಗಳನ್ನು ಮಾರಾಟಕ್ಕಿಟ್ಟಿದ್ದಾರೆ; ಪಕ್ಕದ ಅಂಗಡಿಯಲ್ಲಿ ಕೆಲವರು ಮೃದಂಗಾದಿಗಳನ್ನು ಸಿದ್ಧಪಡಿಸುತ್ತಿದ್ದಾರೆ. ಇಲ್ಲಿಂದ ಕಿರಿದಾದ ಓಣಿಯೊಂದು ಹೆದ್ದಾರಿಯಿಂದ ತಿರುಗುತ್ತಿದೆ. ಓಣಿಯ ಕೊನೆಯಲ್ಲಿ ಬೀದಿಯಿಂದ ಸುಮಾರು ನೂರುಗಜ ದೂರದಲ್ಲಿ ಮಹಾದ್ವಾರವೊಂದು ಗೋಚ ರಿಸುತ್ತಿದೆ. ಒಳಗೆ ಪ್ರವೇಶಿಸಿದಾಗ ಮೂರು ಮಹಡಿಗಳುಳ್ಳ ಬೃಹದಾಕಾರದ ಭವ್ಯ ಪುರಾತನ ಮಂದಿರವೊಂದು ನಮ್ಮನ್ನು ಸ್ವಾಗತಿಸುವುದು. ಇದೇ ಠಾಗೋರ್ ಮನೆತನದವರ ನಿವಾಸಸ್ಥಾನ. ಈ ಮಂದಿರದಲ್ಲೇ ಕ್ರಿ. ಶ. 1861 ನೆಯ ವರ್ಷದ ಮೇ ತಿಂಗಳ ಏಳನೆಯ ದಿನದಂದು ಓರ್ವ ಸುಪುತ್ರನ ಜನನ ವಾಯಿತು. ಶಿಶುವಿಗೆ ರವೀಂದ್ರನಾಥ ಠಾಗೋರನೆಂದು ಹೆಸರಿಡಲಾಯಿತು.

ರವೀಂದ್ರನಾಥನ ತೀರ್ಥರೂಪರೇ ಮಹಾನ್ ಸಾಧುಗಳೆನ್ನಿಸಿಕೊಂಡ ದೇವೇಂದ್ರನಾಥ ಠಾಗೋರನು. ಊರ ಜನರೆಲ್ಲರೂ ಠಾಗೋರನ ಸರಳ ಜೀವನ, ನಿರ್ಮಲ ಭಕ್ತಿಯನ್ನು ಕಂಡು ಅವನನ್ನು 'ಮಹರ್ಷಿ'ಗಳೆಂದೇ ಗೌರವದ ಹೆಸರಿ ನಿಂದ ಕರೆಯುತ್ತಿದ್ದರು. ದೇವೇಂದ್ರನಾಥನ ತಂದೆಯೇ ದ್ವಾರಕನಾಥ ಠಾಗೋ ರನು. ಇವನಾದರೋ ಆಗರ್ಭಶ್ರೀಮಂತನಾಗಿ ವೈಭವಪೂರ್ಣ ಜೀವನವನ್ನು ಸಾಗಿಸಿ 'ಯುವರಾಜ' ದ್ವಾರಕನಾಥನೆಂದು ಲೋಕಪ್ರಸಿದ್ಧನಾಗಿದ್ದನು. ರವೀಂದ್ರನ ಜನನವಾದಾಗ ಠಾಗೋರ್ ವಂಶದವರ ಹಿಂದಿನ ವೈಭವವು ಬಹಳಷ್ಟು ಕುಂದಿತ್ತಾದರೂ ಇನ್ನೂ ಶ್ರೀಮಂತರಾಗಿಯೇ ಇದ್ದರು; ತಮ್ಮ

ಮಕ್ಕಳಿಗೆ ಅತ್ಯುತ್ತಮ ವಿದ್ಯಾಭ್ಯಾಸವನ್ನು ಮಾಡಿಸಿದರು. ಠಾಗೋರ್ ಕುಟುಂಬವು ಬಲು ದೊಡ್ಡದು. ರವೀಂದ್ರನೇ ಮಹರ್ಷಿಯ ಹದಿನಾಲ್ಕು ಮಕ್ಕಳಲ್ಲಿ ಕಿರಿಯವನು. ರವೀಂದ್ರನು ಇನ್ನೂ ಚಿಕ್ಕವನಿದ್ದಾಗ ಅವನ ಅಣ್ಣಂದಿರೂ ಅಕ್ಕಂದಿರೂ ಹಲವರು ಪ್ರಾಯಪ್ರಬುದ್ಧರಾಗಿ ವಿವಾಹಿತರಾಗಿದ್ದರು. ಅವನ ಬಾಲ್ಯದ ಒಡನಾಡಿಗಳಿಬ್ಬರೂ ಪ್ರಾಯದಲ್ಲಿ ಅವನಿಗಿಂತ ತುಸು ದೊಡ್ಡವರು. ಒಬ್ಬನು ಅವನೊತ್ತಿನ ಅಣ್ಣ ಸೋಮೇಂದ್ರ, ಇನ್ನೊಬ್ಬನು ಅಕ್ಕನ ಮಗ ಸತ್ಯ. ಈ ಮೂವರೂ ಒಟ್ಟಿಗೆ ಆಡುತ್ತಿದ್ದರು, ಒಟ್ಟಿಗೆ ಓದುತ್ತಿದ್ದರು.

ತಮ್ಮ ಬಾಲ್ಯದ ಹಾಗೂ ಶಾಲಾದಿನಗಳ ಸವಿನೆನಪುಗಳನ್ನು ಸ್ವತಃ ರವೀಂದ್ರರೇ ನಮಗೆಲ್ಲ ಉಣಬಡಿಸಿದ್ದಾರೆ. 'ನನ್ನ ನೆನಪುಗಳು' ಎಂಬ ಪುಸ್ತಕದಲ್ಲಿ ತಮ್ಮ ಬಾಲ್ಯಾರಭ್ಯ ಸುಮಾರು 25 ವರುಷಗಳ ಜೀವನವನ್ನು ವರ್ಣಿಸಿರುವರು. 'ನನ್ನ ಬಾಲ್ಯದ ದಿನಗಳು' ಎಂಬ ಇನ್ನೊಂದು ಪುಸ್ತಕದಲ್ಲಿ ಹದಿನೇಳು ವರುಷದ ವರೆಗಿನ ಅಂದರೆ ಅವರು ಮೊದಲಬಾರಿ ಇಂಗ್ಲೆಂಡಿಗೆ ಪ್ರಯಾಣ ಮಾಡುವಲ್ಲಿವರೆಗಿನ, ಅದರಲ್ಲೂ ಬಾಲ್ಯದ ಹೊಸ ಹೊಸ ಅನುಭವಗಳನ್ನು ವಿಶೇಷವಾಗಿ ನಿರೂಪಿಸಿರುವರು. ಮಕ್ಕಳಿಗಾಗಿ ಬರೆದ 'ಬಾಲಚಂದ್ರ'ವೆಂಬ ಕವನಸಂಗ್ರಹದಲ್ಲಿ ತಮ್ಮದೇ ಬಾಲ್ಯದ ನೆನಪುಗಳನ್ನು ಒಡಮೂಡಿಸಿದ್ದಾರೆ. ಇವೆಲ್ಲವುಗಳಿಂದ ಭಾರತದ ಮಹಾಪುರುಷರಲ್ಲಿ ಒಬ್ಬರೆನ್ನಿಸಿಕೊಂಡ ರವೀಂದ್ರನಾಥರ ಬಾಲ್ಯಜೀವನದ ಚಿತ್ರವನ್ನು ನಮ್ಮ ಮನಃಪಟಲಗಳಲ್ಲಿ ನಿರ್ಮಿಸಿಕೊಳ್ಳಬಹುದು.

ಮಕ್ಕಳೆಲ್ಲರೂ ಸಾಮಾನ್ಯರಂತೆ ಬಳೆದರು. ಅನಾವಶ್ಯಕವಾದ ಆಟದ ಗೊಂಬೆಗಳಾವುವೂ ಅವರಿಗಿದ್ದಿಲ್ಲ. ಕಾರಣ, ಮಹರ್ಷಿಗೆ ಇವೊಂದೂ ಹಿಡಿಸುತ್ತಿದ್ದಿಲ್ಲ. ಮುಂದೆ ರವೀಂದ್ರರೇ ತಮ್ಮ ತಂದೆಯವರಲ್ಲಿ ಮಕ್ಕಳ ಕುರಿತಾಗಿದ್ದ ದೂರದರ್ಶಿತ್ವವನ್ನು ಬಹಳವಾಗಿ ಶ್ಲಾಘಿಸಿರುವರು. ಏಕೆಂದರೆ ಸಿದ್ಧವಾದ ನಾನಾ ಆಟದ ಒಡವೆಗಳನ್ನು ಮಕ್ಕಳಿಗಿತ್ತರೆ ಅವರ ಸ್ವಾಭಾವಿಕವಾದ ಕಲ್ಪನಾಶಕ್ತಿಯೂ ಸಂಶೋಧನಾಶಕ್ತಿಯೂ ಎಂದೂ ಬೆಳೆಯಲಾರವು. ರಚನಾಶಕ್ತಿಯಿಂದ ದೊರಕುವ ಆನಂದವೇ ಅತ್ಯಂತ ಮಹತ್ವವಾದುದು. ಬೇರೆಯವರಿಂದ ತಯಾರಿಸಲ್ಪಟ್ಟ ಯಾವುದೇ ಆಟದ ಸಾಮಾನುಗಳಿರಲಿ, ಮಕ್ಕಳು ಬಲು ಬೇಗನೇ ಅವುಗಳಿಂದ ಬೇಸರಗೊಳ್ಳುವರು. ಆದುದರಿಂದಲೇ ಠಾಗೋರ್ ಮಕ್ಕಳು ಸಣ್ಣಸಣ್ಣ ಆಟದ ವಸ್ತುಗಳನ್ನು ತಮ್ಮ ಕಲ್ಪನಾಶಕ್ತಿಯಿಂದಲೇ ಸಿದ್ಧಪಡಿಸಿಕೊಂಡು ವಿಶೇಷವಾದ ಆನಂದವನ್ನನುಭವಿಸುತ್ತಿದ್ದರು. 'ಬಾಲಚಂದ್ರ'

ವೆಂಬ ಕವನಸಂಗ್ರಹದಲ್ಲಿ 'ಆಟದ ಒಡವೆಗಳು' ಎಂಬ ಕವನವೊಂದಿದೆ. ಇದರಲ್ಲಿ ಮಗುವಿಗೂ ಮಾನವನಿಗೂ ಇರುವ ಸ್ವಭಾವ ವ್ಯತ್ಯಾಸವನ್ನು ಬಹು ಅಂದವಾಗಿ ನಿರೂಪಿಸುತ್ತಾರೆ:—

'ಎಲೆ ತರಳ ನೀನೆಷ್ಟು ಸುಖಿಯಾಗಿ ಕುಳ್ಳಿರುವೆ ಧೂಳಿನಲಿ
ಆಡುತ್ತ ದಿನವೆಲ್ಲ ಮುರಿದ ರೆಂಬೆಯ ಹಿಡಿದು,
ರೆಂಬೆಯಾಟವ ನೋಡಿ ನೋಡಿ ನಾ ನಸುನಗುವೆ.
ಎಲೆ ತರಳ ನಿನ್ನಂತೆ ಮಣ್‌ಕೋಲ್ಗಳಾಟದಲಿ
ತಲ್ಲೀನತೆಯನೈದುವಾ ಕಲೆಯ ಮರೆತಿಹೆನು.
ಹುಡುಕುತಿಹೆ ನಾನಿದೋ ಬಹು ಬೆಲೆಯ ಒಡವೆಗಳ
ಬೆಳ್ಳಿಬಂಗಾರಗಳ ಕೂಡಹಾಕುತ್ತಿರುವೆ.
ಏನೆ ದೊರೆಕಲಿ ನಿನಗೆ ದೊರೆತುದನು ಕೈಗೆತ್ತಿ
ಕೊಂಡಾಡುತಾನಂದದಾಟಗಳ ಸೃಜಿಸಿಕೊಂಬೆ.
ದೊರಕಲಾರದ ವಸ್ತುವನು ಬಯಸಿ ಬಾಯ್ಬಿಟ್ಟು
ಕಳೆಯುತಿಹೆನೆನ್ನ ಕಾಲವನು ಶಕ್ತಿಯನು.'

ಒಂದು ದೃಷ್ಟಿಯಿಂದ ನೋಡಿದರೆ ಠಾಗೋರ್ ಮಕ್ಕಳ ಜೀವನ ಪ್ರಪಂಚವು ಬಹು ಕಿರಿದಾಗಿತ್ತೆನ್ನಬಹುದು. ಅವರನ್ನು ಗೇಟಿನಿಂದ ಹೊರಗೆ ಎಂದೂ ಹೋಗಬಿಡುತ್ತಿದ್ದಿಲ್ಲ. ಇದರಿಂದಾಗಿ ಮಕ್ಕಳಿಗೆ ಬಾಹ್ಯಪ್ರಪಂಚಾನುಭವವೇನೂ ದೊರಕುತ್ತಿದ್ದಿಲ್ಲ. ಈಗಿನಂತೆ ಜೊರಸಾಂಕೋವು ಆಗಲೂ ಕಲ್ಕತ್ತನಗರದ ಮಧ್ಯದಲ್ಲಿತ್ತು. ದಿನಾಲೂ ಗೇಟನ್ನು ದಾಟಿಹೋಗಿ ಬೀದಿಯ ಸುಂದರ ದೃಶ್ಯ, ಜನರ ಕೋಲಾಹಲ, ಕುತೂಹಲಾದಿಗಳನ್ನು ಕಣ್ದಣಿಯೆ ಕಂಡು ಹಿಂದಿರುಗುತ್ತಿದ್ದ ಸೇವಕವರ್ಗದವರನ್ನು ಕಂಡು ಮಕ್ಕಳು ಅಸೂಯೆ ಪಡುತಿದ್ದರು. ಆಗಿನ ಕಾಲದಲ್ಲಿ ಬಸ್ಸುಗಳಾಗಲಿ ಟ್ರಾಂಗಳಾಗಲಿ ಇದ್ದಿಲ್ಲ. ಶ್ರೀಮಂತರು ಉತ್ತಮ ಜಾತಿಯ ಕುದುರೆ ಸಾರೋಟುಗಳನ್ನು ಸ್ವಂತ ಉಪಯೋಗಕ್ಕಾಗಿ ಇಟ್ಟುಕೊಂಡಿದ್ದರು. ಸಮವೇಷ ಧರಿಸಿದ ಆಳುಗಳು ಅವನ್ನು ಓಡಿಸುತಿದ್ದರು. ಚಿತ್ಪೂರುಮಾರ್ಗದಲ್ಲಿ ರಟರಟನೆ ಓಡುತ್ತಿರುವ ಬಂಡಿಗಳ ಸದ್ದನ್ನೂ ಬಂಡಿಯಾಳುಗಳ ಚಾಟಿಯ ಹೊಡೆತವನ್ನೂ ಕುತೂಹಲದಿಂದ ಕೇಳುತ್ತಿದ್ದರು. ಮಧ್ಯಮ ವರ್ಗದವರು ಪಲ್ಲಕಿಯಲ್ಲಿ ಕುಳಿತೋ ಇಲ್ಲವೇ ನಾಲ್ಕೈದು ಮಂದಿ ಒಟ್ಟಾಗಿ 'ಪಾಲುಬಂಡಿ'ಯನ್ನು ಬಾಡಿಗೆಗೆ ಮಾಡಿಕೊಂಡೋ ತಂತಮ್ಮ ಕೆಲಸಗಳಿಗೆ ಹೋಗುತ್ತಿದ್ದರು. ಬೀದಿಯಲ್ಲಿ ಸುತ್ತುತ್ತಾ 'ಬೆಲ್ ಹೂ

ಬೇಕೇ ಬೆಲ್ ಹೂ' 'ಮಾವಿನಕಾಯಿ ಬೇಕೇ ಮಾವಿನಕಾಯಿ' ಎಂಬ ಹೂಹಣ್ಣು ಮಾರುವವರ ಕೂಗನ್ನೂ ಮಕ್ಕಳು ಕೇಳುತ್ತಿದ್ದರು. ಕೂಗನ್ನು ಕೇಳುತ್ತಿದ್ದಂತೆ ಪುಟ್ಟ ರವೀಂದ್ರನು ತನ್ನ ಕಲ್ಪನಾಸಾಮ್ರಾಜ್ಯದಲ್ಲಿ ಅದಾವುದೋ ಮೋಹಿನೀ ಲೋಕದ ರಮಣೀಯ ದೃಶ್ಯವನ್ನು ಚಿತ್ರಿಸುತಿದ್ದನು. ಮನೆಯ ಜಗಲಿಯ ಒಂದು ಮೂಲೆಯಲ್ಲಿ ನಿಂತು ತೋಟದ ಗೋಡೆಯ ಹೊರಭಾಗದಲ್ಲಿ ದೂರದಲ್ಲಿ ಕಾಣುತ್ತಿದ್ದ ಜನನಿಬಿಡವಾದ ಹೊಲಗೇರಿಯೊಂದನ್ನು ನೋಡುತ್ತಿದ್ದನು. ಹೀಗೆ ಗಂಟೆಗಟ್ಟಲೆ ನಿಂತು ತಂತಮ್ಮ ಕೆಲಸಗಳಿಗಾಗಿ ಹೋಗಿಬರುತ್ತಿದ್ದ ಜನರನ್ನು ನೋಡುತ್ತಿದ್ದಂತೆ ಅವರ ಕುರಿತಾಗಿ ಕತೆಗಳನ್ನು ಕಟ್ಟುತಿದ್ದನು. ಆವರಣದ ಹೊರವಳಯದ ಪ್ರತಿಯೊಂದು ವಸ್ತುವೂ ತಾನು ಎಂದೆಂದೂ ಕಾಣದಂಥ ರಮಣೀಯ ಹಾಗೂ ಸಾಹಸಪೂರ್ಣ ಜಗತ್ತಾಗಿ ತೋರಿತು.

ಮನೆಯೊಳಗೂ ಎರಡು ಭಿನ್ನ ಜಗತ್ತುಗಳು—ಪ್ರಾಯಸ್ಥರದೊಂದು, ಮಕ್ಕಳದ್ದಿನ್ನೊಂದು. ಈಗಿನಂತೆ ಚಲಚ್ಚಿತ್ರಗಳಾಗಲಿ, ಸಾರ್ವಜನಿಕ ಮನೋರಂಜನೆಗಳಾಗಲಿ, ಕಾಲ್ಚೆಂಡು ಕ್ರಿಕೆಟುಗಳಾಗಲಿ, ವಿನೋದ ವಿಹಾರಗಳಾಗಲಿ ಅಂದು ಇದ್ದಿಲ್ಲ. ತಂತಮ್ಮ ಮನೆಗಳಲ್ಲೇ ಸ್ನೇಹಿತರು ಬಂಧುಗಳು ಎಲ್ಲರೊಂದಾಗಿ ಸಂತೋಷ ಕೂಟವನ್ನೇರ್ಪಡಿಸುತ್ತಿದ್ದರು. ವೈಭವಪೂರ್ಣ ಠಾಗೋರ್ ಕುಟುಂಬದಲ್ಲಿ ವಯಸ್ಕರ ಲೋಕವು ಬಹು ಚಮತ್ಕಾರಕಾರಿಯಾಗಿತ್ತು; ವಿವಿಧ ಚಟುವಟಿಕೆಗಳು, ವಿನೋದಗಳು ನಿರಂತರ ಸಾಗುತ್ತಿದ್ದವು. ಮುಂದೆ ರವೀಂದ್ರರೇ ಹೇಳಿದಂತೆ, ಇವರ ಆನಂದ ಕೋಲಾಹಲದ ಬುಗ್ಗೆಯಿಂದ ಚಿಮ್ಮುತ್ತಿದ್ದ ಲಹರಿಯ ಕಣಗಳನ್ನಷ್ಟೆ ಮಕ್ಕಳು ದೂರದಿಂದ ಸವಿಯುತಿದ್ದರು. ಕುತೂಹಲಿಗಳಾಗಿ ಬಹಳ ಸಮಿಾಪಕ್ಕೆ ಬಂದಾಗ 'ದೂರ ಓಡಿಹೋಗಿ ಆಡಿರಿ' ಎಂದು ದೊಡ್ಡಣ್ಣಂದಿರೂ ಭಾವಂದಿರೂ ಕೂಗುತಿದ್ದರು. ಅಂತೆಯೇ ಮಕ್ಕಳೆಲ್ಲ ದೂರ ಹೋಗಿ ಕೇಕೆ ಹಾಕಿ ಕುಣಿದಾಡುತಿದ್ದರು. ಮರುಕ್ಷಣದಲ್ಲಿ 'ಬಾಯಿ ಮುಚ್ಚಿರಿ' ಎಂದು ದೊಡ್ಡವರ ಗರ್ಜನೆ ಕೇಳಿಸಿತು. 'ಆದರೆ ಸಹಜವಾದ ಆಟದಲ್ಲಿ ಕೋಲಾಹಲವು ಅತ್ಯಗತ್ಯ'ವೆಂದು ರವೀಂದ್ರರು ಹೇಳುತ್ತಾರೆ.

ರವೀಂದ್ರನಾಥರ ಸ್ಮರಣೆಯಂತೆ ಜೊರಸಾಂಕೋದ ಮಕ್ಕಳ ಜಗತ್ತಿನಲ್ಲಿ ಅವರನ್ನು ನೋಡಿಕೊಳ್ಳುತಿದ್ದ ಗಂಡು ಹೆಣ್ಣಾಳುಗಳದೇ ದೊಡ್ಡ ಪಾತ್ರ. ಇವರೆಲ್ಲರ ಸವಿನೆನಪುಗಳನ್ನೂ ತಮ್ಮ ಅಣ್ಣಂದಿರೊಡನೆಯೂ ಭಾವಂದಿರೊಡನೆಯೂ ಕೂಡಿ ಆಡಿದ ಹುಡುಗಾಟಿಕೆಯ ಮಧುರಾನುಭವಗಳನ್ನೂ, ತಾಯಿಯೊಂದಿಗೆ ಪ್ರೀತಿಯಿಂದ ಕಳೆಯುತಿದ್ದ ಸಮಯವನ್ನೂ, ಎಲ್ಲಕ್ಕಿಂತಲೂ ಹೆಚ್ಚಾಗಿ ಕುತೂಹಲಜನಕವಾದ ತಮ್ಮ ಏಕಾಂತ ಕ್ರೀಡೆಗಳ ಮತ್ತು ಕಲ್ಪನೆಗಳ ಸವಿನೆನಪುಗಳನ್ನೂ

ನಮಗಾಗಿ ಬರೆದಿಟ್ಟಿರುವರು. ಸೋಮೇಂದ್ರಸತ್ಯೇಂದ್ರರು ರವಿಗಿಂತ ಎರಡು ವರ್ಷಕ್ಕೆ ದೊಡ್ಡವರಾಗಿದ್ದುದರಿಂದ ಬಹುಮಟ್ಟಿಗೆ ರವಿ ಒಂಟಿಯಾಗಿಯೇ ಇರುತಿದ್ದನು. ಆರುವರುಷದ 'ದೊಡ್ಡ ಮನುಷ್ಯ'ನು ನಾಲ್ಕು ವರ್ಷದ ಮಗುವಿಗಿಂತ ತಾನು ಹೆಚ್ಚಿನವನೆಂದು ತಿಳಿಯುತ್ತಾನೆ! ರವೀಂದ್ರರ ನೋಟದ ಮೂಲಕ ಹಿಂದಿನ 1860ರ ದಿನಗಳನ್ನವಲೋಕಿಸಿದಾಗ ಒಂದರ ಮೇಲೊಂದರಂತೆ ಸಣ್ಣ ಸಣ್ಣ ಸುಂದರ ದೃಶ್ಯಗಳನ್ನು ನಾವು ಕಾಣುತ್ತೇವೆ. ಅವು ಕ್ರಮಬದ್ಧವಾಗಿಲ್ಲದಿರಬಹುದು; ಆದರೆ ಸ್ಫೂರ್ತಿದಾಯಕಗಳಾಗಿವೆ.

*   *   *

ಮನೆಗೆ ಬಂದ ದರ್ಜಿಯ ಮುಂದುಗಡೆ ಮೂವರು ಮಕ್ಕಳು ನಿಂತಿದ್ದಾರೆ. ಹೊಸ ಉಡುಪನ್ನು ಧರಿಸುವುದೆಂದರೆ ಮಕ್ಕಳಿಗೆ ದೊಡ್ಡ ಹಬ್ಬದಂತಲ್ಲವೇ? 'ತುಂಬಾ ಜೇಬುಗಳು, ತುಂಬಾ ಜೇಬುಗಳು' ಎಂದು ಎಲ್ಲಾ ದೇಶದ ಎಲ್ಲಾ ಮಕ್ಕಳಂತೆ ಅವರೂ ಆಗ್ರಹ ಮಾಡುತ್ತಾರೆ. ಅಂಗಿ ಹಾಕಿದ ಕೂಡಲೇ ಜೇಬುಗಳು ಮಕ್ಕಳ ಸಂಗ್ರಹದಿಂದ ತುಂಬಿಕೊಳ್ಳುತ್ತವೆ . . . ಹೊಸ ಉಡುಪನ್ನು ಧರಿಸಿದ ಆನಂದೋತ್ಸಾಹದೊಂದಿಗೆ ತಮ್ಮ ಕೋಣೆಗಳನ್ನು ಸೇರುತ್ತಾರೆ; ಹೋಗುತ್ತ ತಮ್ಮ ಚಪ್ಪಲಿಗಳನ್ನು ಚೆಂಡಾಡುತ್ತಾರೆ, ಓಡಿ ಹಿಡಿಯುತ್ತಾರೆ, ಮತ್ತೆ ಚೆಂಡಾಡುತ್ತಾರೆ; ಹೀಗೆ ವಿನೋದಗೊಳ್ಳುತ್ತಾರೆ. ಪಾಪ, ಚಪ್ಪಲಿಗಳನ್ನು ಪಾದಗಳಲ್ಲಿ ಹಾಕಿಕೊಳ್ಳಬೇಕೆಂದು ಅವರಿಗೆ ಹೇಳುವವರಾರು?

*   *   *

ಮೂವರೂ ಸುಖಸಂತೋಷಗಳಲ್ಲಿ ಮಗ್ನರಾಗಿ ತಮ್ಮ ಶಾಲಾ ಕೊಠಡಿಯಲ್ಲಿ ತುದಿಗಾಲಿನಲ್ಲಿ ಕುಳಿತಿದ್ದಾರೆ. ನೆಲದಲ್ಲಿ ಸುತ್ತಲೂ ಮಣ್ಣುಕಲ್ಲುಗಳು ರಾಶಿಯಾಗಿ ಬಿದ್ದಿವೆ. ಅವರೊಂದು ಪರ್ವತವನ್ನು ಕಟ್ಟುವ ಕೆಲಸದಲ್ಲಿ ತೊಡಗಿದ್ದಾರೆ. ಕಲ್ಕತ್ತದ ಮಕ್ಕಳಿಗೆ ಪರ್ವತವೆಂದರೆ ಆಶ್ಚರ್ಯಕರವಾದ ವಸ್ತುವೇ ಸರಿ. ಇದಾದರೋ ಅದ್ಭುತ ರಮ್ಯಶಿಲೆಗಳಿಂದ ಕೂಡಿದ ಪರ್ವತವೇ!... ಏನು ದಾದ (ದೊಡ್ಡಣ್ಣ) ಬರುತ್ತಾನೆಯೇ? ಬರಲಿ, ಚಿಂತಿಲ್ಲ. ಇದು ಎಷ್ಟು ಚಂದವಾಗಿದೆಯೋ ತಾನೇ ನೋಡುವನಂತೆ . . . 'ಎಂಥಾ ತುಂಟ ಕೆಲಸವನ್ನು ಮಾಡುತ್ತಿದ್ದೀರಾ ಮಕ್ಕಳಿರಾ? ಈ ಕಲ್ಲುಗಳೆಲ್ಲಿಂದ ಬಂದುವು? ಏನು, ನನ್ನ ಶಿಲೋದ್ಯಾನದಿಂದಲೇ? ಜಾಗ್ರತೆ, ಅಲ್ಲಿಗೇ ಮರಳಿ ಕೊಂಡುಹೋಗಿರಿ!'— ಇಲ್ಲ, ದೊಡ್ಡವರಾದರೇನು? ಮಕ್ಕಳ ಮನಸ್ಸನ್ನು ತಿಳಿಯುವ ಶಕ್ತಿ ಎಂದೂ ಅವರಿಗಿಲ್ಲ.

*   *   *

ವ್ರಜೇಶ್ವರನು ಬಡಕಲಾದ ಬ್ರಾಹ್ಮಣ ಆಳು. ಅವನ ಮುಖ್ಯ ಕೆಲಸ ಮಕ್ಕಳನ್ನು ನೋಡಿಕೊಳ್ಳುವುದು. ವ್ರಜೇಶ್ವರನು ಕೊಳದಲ್ಲಿ ಮಿಂದು ಮಡಿಯಾಗಿ ಬಹು ಜಾಗ್ರತೆಯಿಂದ ಮರಳುತಿದ್ದಾನೆ. ದಾರಿಯಲ್ಲಿ ಎಲ್ಲಿ ಅಶುಚಿಯಾದೀತೋ ಎಂಬ ಅಂಜಿಕೆ ಬೇರೆ. ತನ್ನ ಹೊರತು ದೇವ ನಿರ್ಮಿತ ಜಗತ್ತೇ ಮಲಿನವಾದುದೆಂಬ ಭಾವನೆ ಆತನದ್ದು! ಇಂತಹ ವ್ಯಕ್ತಿ ತನ್ನ ಮಲಿನ ಹಸ್ತಗಳಿಂದಲೇ ಮಕ್ಕಳಿಗೆ ಉಣಬಡಿಸುತ್ತಾನೆ; ಎರಡನೆಯ ಸರ್ತಿ ಬಳುಸುವುದೆಂದರೆ ಆತನಿಗೆ ಬಲು ರೋಷ. ಅವರು ಬೇಡವೆಂದಾಗ ಆತನ ಸಂತೋಷ ಹೇಳಿತೀರದು. ವ್ರಜೇಶ್ವರನ ಕೊರತೆಯನ್ನು ಮಕ್ಕಳು ಚೆನ್ನಾಗಿ ಅರಿತಿದ್ದರು. ರೊಟ್ಟಿ ಹಾಲುಗಳೆಂದರೆ ಅವನ ಪಂಚ ಪ್ರಾಣ. ಅವನು ಬಯಸುತ್ತಿದ್ದ ಔತಣದುಣಿಸನ್ನು ತಪ್ಪಿಸಲು ಅವರೆಲ್ಲ ಸಂಕೋಚಪಟ್ಟು ಕಮ್ಮಿಯಾಗಿಯೇ ಉಣ್ಣುತಿದ್ದರು. ರವಿ ಹಾಲನ್ನೆಂದೂ ಅತಿಯಾಗಿ ಆಶಿಸುತಿದ್ದಿಲ್ಲ.

*   *   *

ಕೆಲವು ವೇಳೆ ಮಕ್ಕಳು ದಿನದ ಕೆಲಸವನ್ನು ಮುಗಿಸಿ ಸಂಜೆಯ ಸಮಯವನ್ನು ಆಳುಗಳ ಕೊಠಡಿಯಲ್ಲಿ ಕಳೆಯುವರು. ಮಸುಕಾದ ತೂಗು ದೀಪವು ಕೊಠಡಿಯ ಮಧ್ಯದಲ್ಲಿ ನೇತಾಡುವುದು. ವಿದ್ಯುದ್ದೀಪಗಳಾಗಲಿ, ಮಣ್ಣೆಣ್ಣೆಯ ಲಾಂಧ್ರಗಳಾಗಲಿ 1860ರ ಕಾಲದಲ್ಲಿದ್ದಿಲ್ಲ. (ಮಣ್ಣೆಣ್ಣೆಯ ಲಾಂಧ್ರಗಳು ಮೊತ್ತಮೊದಲು ಉಪಯೋಗಕ್ಕೆ ಬಂದಾಗ ಎಷ್ಟೊಂದು ಪ್ರಭೆಯನ್ನು ಬೀರುತ್ತಿದ್ದಿಲ್ಲ!) ಒಬ್ಬೊಬ್ಬರು ಒಂದೊಂದು ಕತೆಯನ್ನು ಹೇಳುವರು. ಕೆಲವೊಮ್ಮೆ ರಾಮಾಯಣದ ಭಾಗಗಳನ್ನು ಬಾಯಿಪಾಠ ಹೇಳುವರು; ಮಕ್ಕಳು ಇವನ್ನು ಕೇಳುವುದಕ್ಕಾಗಿಯೇ ಅಲ್ಲಿ ಸೇರುವರು. ತಮ್ಮ ಅಚ್ಚುಮೆಚ್ಚಿನ ಪ್ರಾಸಬದ್ಧವಾದ ಜಾನಪದಗೀತಗಳನ್ನು ಆನಂದದಿಂದ ಹಾಡುವರು. ಅವರು ಹೇಳುವ ಕತೆಗಳೆಲ್ಲ ಸಣ್ಣಕತೆಗಳೇ! ರಾತ್ರಿ ಮಲಗುವುದಕ್ಕಿಂತ ಮುಂಚಿತವಾಗಿಯೇ ಮುಗಿಯುತಿದ್ದುವು. ಕೆಲವು ವೇಳೆ ಕ್ರೂರಾದ್ಭುತ ದರೋಡೆಖೋರರ ಕತೆಗಳನ್ನು ಹೇಳುವರು. ಅವರ ಕತೆಗಳಲ್ಲಿ ಬರುವ ವ್ಯಕ್ತಿಗಳನ್ನು ಒಂದಲ್ಲೊಂದು ದಿನ ಯಾರೂ ಸಂಧಿಸಬಹುದು. ಕೆಲವು ದರೋಡೆಖೋರರು ತಮ್ಮ ಧೈರ್ಯ, ಸಾಹಸ, ಹಾಗೂ ಅಬಲೆಯರ ರಕ್ಷಣಾದಿನಗಳಿಂದ ಪ್ರಸಿದ್ಧರಾಗಿದ್ದಾರೆ. ಅಂಥವರ ಸಾಹಸ ಕೃತ್ಯಗಳನ್ನು ಒಂದೂ ಬಿಡದೆ ಪುನರಾವೃತ್ತಿ ಮಾಡುವರು. ರವಿ ಎಲ್ಲವನ್ನೂ ತಲ್ಲೀನತೆಯಿಂದ ಕೇಳುವನು.

ಉಳಿದ ಸಂಜೆಗಳನ್ನು ತಾಯಿಯ ಕೊಠಡಿಯಲ್ಲಿ ಹಾಸಿಗೆಯಲ್ಲಿ ನುಸುಳಿಕೊಂಡು ತಾಯಿಯೋ ಅತ್ತೆಯೋ ಹೇಳುವ ಯಕ್ಷಯಕ್ಷಿಣಿಯರ ಕತೆಗಳನ್ನು

. . . . ರಾಜಕುಮಾರನೊಬ್ಬನು ಅಂತ್ಯವಿಲ್ಲದ ಬಯಲಲ್ಲಿ ಸಂಚರಿಸುವುದನ್ನು. . . . ಏಳು ಸಮುದ್ರದಾಚೆಗಿನ ಅಪ್ಸರೆಯರ ನಾಡನ್ನು ಸೇರುವುದನ್ನು . . . . ಕೇಳುವುದರಲ್ಲಿ ಕಳೆಯುವನು.

* * *

ಭಯಗ್ರಸ್ತನಾದ ಹುಡುಗನೊಬ್ಬನು ಸುಣ್ಣದ ಕಡ್ಡಿಯಿಂದ ಜಗಲಿಯ ಮೇಲೆ ಬರೆದ ವೃತ್ತದೊಳಗೆ ನಿಂತಿದ್ದಾನೆ. ಅದನ್ನು ಬರೆದ ಆಳು ಹುಡುಗನು — ಕತೆಯಲ್ಲಿ ಲಕ್ಷ್ಮಣನು ಸೀತೆಯ ಸುತ್ತಲೂ ಬರೆದ ಮಾಂತ್ರಿಕ ರೇಖೆಯಂತೆ ಇದೂ ಮಾಯಾರೇಖೆ ಎನ್ನುತ್ತಾನೆ. ರವಿ ಅವನ ಮಾತನ್ನು ನಂಬಿ ಹಜ್ಜೆಯಿಡುವುದಕ್ಕೆ ಹಿಂಜರಿಯುತ್ತಾನೆ. ತನ್ನ ಈ ಬಂಧನ ಮೋಕ್ಷವಾಗುವ ತನಕ, ಅಂಗಳದಲ್ಲಿ ಅಡ್ಡಾಡುತ್ತಿರುವ ಜನರನ್ನೂ, ಕೊಳದಲ್ಲಿ ಮಿಯುವುದಕ್ಕಾಗಿ ಹೋಗುವವರನ್ನೂ, ಕ್ರಮೇಣ ಬದಲಾಗುತ್ತಿರುವ ನೆರಳುಳ್ಳ ಆಲದ ಮರವನ್ನೂ ನೋಡುತ್ತಾನೆ. ತಿರುಗುಮುರುಗಾಗಿ ಹೆಣೆದಿರುವ ಅದರ ಬೇರುಗಳ ನೆರಳುಗಳು ಎಷ್ಟೊಂದು ಕಪ್ಪಗೆ ಕಾಣುತ್ತವೆ! ಅದಾವ ರಹಸ್ಯವು ಅಲ್ಲಿ ಅಡಗಿರಬಹುದು!

ಭೂತಪಿಶಾಚಿಗಳೇ ಮನಸ್ಸಿನಲ್ಲಿ ತುಂಬಿರುವ ಬಾಲಕನೊಬ್ಬನು ಪುರಾತನ ಮಂದಿರದ ಕೋಣೆ ಕೋಣೆಗಳನ್ನು ಅನ್ವೇಷಿಸುತಿದ್ದಾನೆ. ಕೆಳಗಿನ ನೆಲದಲ್ಲಿ ಕತ್ತಲಾದ, ಆಶ್ಚರ್ಯಕರವಾದ ಕೋಣೆಗಳಲ್ಲಿ ಇಡಿ ವರ್ಷಕ್ಕೆ ಸಾಕಾಗುವಷ್ಟು ಕುಡಿಯುವ ನೀರನ್ನು ತುಂಬಿರುವ ದೊಡ್ಡ ದೊಡ್ಡ ಮಣ್ಣ ಹಂಡೆಗಳು ತುಂಬಿವೆ. ಕಾರಣ ಈಗಿರುವಂತೆ ನಳ್ಳಿನೀರು ಆಗ ಇದ್ದಿಲ್ಲ. ಗಂಗೆಯ ನೀರು ಫೆಬ್ರವರಿಯಲ್ಲಿ ಸ್ವಚ್ಛವಾದಾಗ ಕುಡಿಯುವ ನೀರನ್ನು ಸಂಗ್ರಹಿಸಿಟ್ಟುಕೊಳ್ಳುವರು. ನಿಜವಾಗಿಯೂ ಈ ಕತ್ತಲಕೋಣೆಗಳಲ್ಲಿ ತುಂಬಾ ದೆವ್ವಗಳಿವೆ; ಎದೆಯಲ್ಲಿ ಕಣ್ಣುಗಳುಳ್ಳ ದೆವ್ವಗಳು, ಗೆರಸೆಯಂಥಾ ಕಿವಿಗಳುಳ್ಳ ದೆವ್ವಗಳು! ಹಾಗೆಯೇ ತೋಟದಲ್ಲಿರುವ ಕೆಲವು ಮರಗಳೂ; ಮನೆಯ ಸಮೀಪದ ಮೂಲೆಯಲ್ಲಿರುವ ದೊಡ್ಡ ಮರದಲ್ಲಿ ಭೂತವೊಂದನ್ನು ದಾದಿಯೊಬ್ಬಳು ನಿಜವಾಗಿಯೂ ಕಂಡಳಲ್ಲವೇ?

* * *

ಕೆಳಗಿನ ಹಜಾರದಲ್ಲಿ ತಂದೆಯವರ ಆಫೀಸು. ಪುಟ್ಟ ರವಿ ಮುದಿ ಕಾರಕೂನ ಕೈಲಾಸನ ತೊಡೆಯನ್ನೇರಿ ಕುಳಿತುಕೊಳ್ಳುವನು. ಕೈಲಾಸನು ಕತೆಗಳನ್ನು ಹೇಳುವನು. ಹುರುಳಿಲ್ಲದ ಪ್ರಾಸಬದ್ಧ ಲಾವಣಿಗಳನ್ನು ತಾನೇ ತಾನಾಗಿ ಸರಾಗ ಹಾಡುತ್ತ ಹೋಗುವನು. ಇವುಗಳಲ್ಲಿ ಅತ್ಯಂತ ಉದ್ವೇಗ

ವನ್ನುಂಟುಮಾಡುವ ಕತೆಗಳೆಂದರೆ ರವಿಯೇ ಕಥಾನಾಯಕನಾಗಿರುವ ಕತೆಗಳು. ರವಿಯೇ ನಾಯಕನಾಗಿ ದರೋಡೆಖೋರರೊಂದಿಗೆ ಹೋರಾಡಿ ಸುಂದರ ರಾಜಕುಮಾರಿಯರನ್ನು ರಕ್ಷಿಸುವವನು. ಕೆಲವು ವರ್ಷಗಳು ಕಳೆದ ಮೇಲೆ ಈ ಕರುಣಾಮೂರ್ತಿಗಳಾದ ಕಚೇರಿಯ ಕಾರಕೂನರೇ ತಮ್ಮಲ್ಲಿದ್ದ ಅಭ್ಯಾಸ ಮಾಡಲಿರುವ ಪುಸ್ತಕವೊಂದನ್ನಿತ್ತು ಮೊಗ್ಗುಬರೆಹಗಾರನನ್ನು ಪ್ರೋತ್ಸಾಹಿಸಿದವರಲ್ಲಿ ಮೊದಲಿಗರಾದರು.

* * *

ಇತರ ಮಕ್ಕಳಲ್ಲಿರುವಂತೆ ರವಿಯಲ್ಲಿಯೂ ಒಂಟಿ ಆಟಗಳೂ, ಸಾಹಸ ಕೃತ್ಯಗಳೂ ಇದ್ದುವು. ಮನೆ ಜಗಲಿಯ ಒಂದು ಮೂಲೆಯಲ್ಲಿ ಧೂಳಿನ ರಾಶಿ ತುಂಬಿತ್ತು. ತೋಟವನ್ನು ಮಾಡಲು ಇದೇ ತಕ್ಕ ಸಂದರ್ಭವೆಂದು ಬಗೆದನು ರವಿ. ಬಹುಜಾಗರೂಕತೆಯಿಂದ ಸೀತಾಫಲದ ಬೀಜವನ್ನು ಹಾಕಿ ನಿತ್ಯವೂ ತಾಳ್ಮೆಯಿಂದ ನೀರನ್ನೆರೆಯುತ್ತಾ ಅದರ ಎಲೆಗಳಿಗಾಗಿ ಕಾಯುತಿದ್ದನು. ಆಳು ಶ್ರದ್ಧೆಯಿಂದ ನೆಲವನ್ನು ಗುಡಿಸಿದಾಗ ಬೀಜವೂ ಧೂಳೂ ಒಂದಾಗಿ ಮಾಯವಾದುವು! ರವಿ ನಿರೀಕ್ಷಿಸುತ್ತಿದ್ದ ತೋಟವು ಹೀಗೆ ಕೊನೆಗೊಂಡಿತು. ಶಾಲೆಯಲ್ಲಿಯೂ ಇಂತಹ ಆಟಗಳನ್ನಾಡುತ್ತಿದ್ದನು. ಅವನೇ ಉಪಾಧ್ಯಾಯನು, ಮರದ ಸರಳುಗಳೇ ವಿದ್ಯಾರ್ಥಿಗಳು. ಇತರ ಎಷ್ಟೋ ಮಕ್ಕಳು ಮಾಡುವಂತೆ ಅವನಿಗೂ ಉಪಾಧ್ಯಾಯರ ಚಿಹ್ನವು ಬೆತ್ತವಾಗಿತ್ತು; ತುಂಟ ನಿರ್ಭಾಗ್ಯ ಕಂಬಗಳು ಬೈಗಳ ಮಳೆಗೂ ಬೆತ್ತದ ನಿರ್ದಾಕ್ಷಿಣ್ಯ ಹೊಡೆತಕ್ಕೂ ಒಳಗಾದುವು. 'ವಾಸ್ತವ ಜೀವನ'ದ ಈ ಆಟಗಳ ಜತೆಗೆ ಪೂಜೆಯ ಆಟವೂ ನಡೆಯುತಿತ್ತು. ಅವನಲ್ಲಿ ಒಂದು ಸಿಂಹದ ಗೊಂಬೆ ಇತ್ತು. ಪುರಾಣಗಳಲ್ಲಿ ಬರುವ ಅಶ್ವಮೇಧ ಕಥೆಯನ್ನು ಕೇಳಿದ್ದ ಆತನು ಸಿಂಹಮೇಧವು ಅದಕ್ಕಿಂತಲೂ ಶ್ರೇಷ್ಠವಾದುದೆಂದು ಭಾವಿಸಿದನು. ತಾನೇ ಅರ್ಚಕನಾಗಿ, ಹಿಡಿದ ಕೋಲನ್ನೇ ಕತ್ತಿಯನ್ನಾಗಿ ಮಾಡಿಕೊಂಡು ಶಿಶುಗೀತೆಯ ತುಂಡಿನಂತಿರುವ ಈ ಕೆಳಗಿನ ಯಾಗಮಂತ್ರವನ್ನು ಸ್ವತಃ ಸೃಜಿಸಿಕೊಂಡನು:

ಸಿಂಹಕಿಶೋರ, ಸಿಂಹಕಿಶೋರ, ಹಾರಿತು, ಹಾರಿತು ರುಂಡ!
ಸಿಂಹಕಿಶೋರ, ಸಿಂಹಕಿಶೋರ, ಜಾರಿತು ಪ್ರಾಣ ದಂಡ!

ಈ ಮಹಾಮಂತ್ರವನ್ನು ಉಚ್ಚಸ್ವರದಿಂದ ಕೂಗುತ್ತ ಕೋಲಿನಿಂದ ಮರದ ಸಿಂಹಕ್ಕೆ ಬಲವಾದ ಏಟನ್ನು ಬಿಗಿದನು.

ಮರುಕ್ಷಣದಲ್ಲಿ ಪುಟ್ಟ ರವೀಂದ್ರನು ತನ್ನದೇ ಕತೆಯನ್ನು ತನ್ನಷ್ಟಕ್ಕೇ ಹೇಳತೊಡಗಿದನು. ಅವನ ಅದ್ಭುತ ಕಲ್ಪನಾಶಕ್ತಿಯು ಮೋಹಿನಿಯರ ಕತೆಗಳನ್ನೂ, ದರೋಡೆಖೋರರ ಕತೆಗಳನ್ನೂ, ರಾಮಾಯಣ ಕತೆಯನ್ನೂ, ತನ್ನ ಹುಲಿಬೇಟೆಯ 'ನೈಜ'ಕತೆಯನ್ನೂ ಆತ್ಮಸಂತೋಷಾರ್ಥವಾಗಿ ಬೇಕಾದಂತೆ ಹೆಣೆಯುತಿತ್ತು. ಜೊರಸಾಂಕೋದ ಮಕ್ಕಳ ಜಗತ್ತು ಸಾಮಾನ್ಯವಾಗಿ ನಿಸ್ತೇಜವಾಗಿದ್ದರೂ ರವಿ ಮಾತ್ರ ಗಂಟೆಗಟ್ಟಲೆ ತನ್ನದೇ ಸಾಹಸ ಜಗತ್ತಿನಲ್ಲಿ ವಿಹರಿಸುತಿದ್ದನು. ಜಗಲಿಯ ಒಂದು ಮೂಲೆಯಲ್ಲಿ ಹಳೆಗಾಲದ ಉಪಯೋಗ ವಿಲ್ಲದ ಪಲ್ಲಕಿಯೊಂದು ಬಿದ್ದಿತ್ತು. ಒಂದು ಕಾಲದಲ್ಲಿ ಇದೇ ಪಲ್ಲಕಿಯು ಎಂಟು ಮಂದಿ ಹೊರುತಿದ್ದ ವರ್ಣರಂಜಿತ ಭವ್ಯ ವಾಹನವಾಗಿತ್ತು. ಅದೀಗ ಮೂಲೆಪಾಲಾಗಿ ಪುಟ್ಟ ರವಿಯ ಗುಟ್ಟಾದ ಆಟದ ಸ್ಥಳವಾಗಿತ್ತು. ರವಿ ಪಲ್ಲಕಿಯನ್ನೇರಿ ಕುಳಿತು, ಕದವಿಕ್ಕಿ, ಬಾಹ್ಯ ಜಗತ್ತಿನಿಂದ ಮರೆಯಾಗುತಿದ್ದನು. ಪಲ್ಲಕಿಯೊಳಗಿನ ಸ್ಥಳವೇ ಆತನ ಕೊನೆಯಿಲ್ಲದ ಸಾಹಸಪ್ರದೇಶವಾಗಿತ್ತು. ಈಗ ಅವನು ಸಾಮಾನ್ಯ ಮಗುವಾಗಿರಲಿಲ್ಲ. ಕಾಡುಗಳಲ್ಲಿಯೂ ಮರುಭೂಮಿಯಲ್ಲಿಯೂ ಸವಾರಿಮಾಡುತ್ತಾ ಆಶ್ಚರ್ಯಕರವಾದ ಪ್ರಯಾಣವನ್ನು ಕೈಕೊಂಡ, ಇಲ್ಲವೇ ಮಾಯಾಪ್ರವಾಹದಲ್ಲಿ ನವಿಲುದೋಣಿಯಲ್ಲಿ ಕುಳಿತು ವಿಹರಿಸುತಿದ್ದ ಓರ್ವ ರಾಜಕುಮಾರನಾಗಿದ್ದ! 'ಬಾಲಚಂದ್ರ'ದಲ್ಲಿ ಬರುವ 'ವೀರ' ಕವನದಲ್ಲಿ ವರ್ಣಿತವಾದ ವಿಷಯವೇ ಪಲ್ಲಕಿಯಲ್ಲಿ ನಡೆದ ಸಾಹಸ ಕಾರ್ಯಗಳಲ್ಲೊಂದು.

ಎಳವೆಯಲ್ಲಿಯೇ ರವೀಂದ್ರನು ಸೌಂದರ್ಯೋಪಾಸಕನಾಗಿದ್ದನು. ಆದರೆ ತನ್ನ ಸೌಂದರ್ಯಾನುಭವಗಳನ್ನೆಲ್ಲ ಶಬ್ದಗಳಲ್ಲಿ ಒಡಮೂಡಿಸಲು ಅಶಕ್ತನಾಗಿದ್ದನು. ಮುಂಜಾನೆ ಹಾಸಿಗೆಯಿಂದೆದ್ದೊಡನೆ ಮನೆಯ ಮುಂದಿನ ತೋಟಕ್ಕೆ ಓಡಿಹೋಗುತ್ತಿದ್ದನು. ತನ್ನನ್ನು ಸ್ವಾಗತಿಸುತಿದ್ದ ತಂಪಾದ ಪರಿಮಳವನ್ನಾಘ್ರಾಣಿಸಿ, ಮಂಜುಮುಸುಕಿದ ಎಳೆ ಹುಲ್ಲು ಎಲೆಗಳ ಸ್ಪರ್ಶಸುಖವನ್ನನುಭವಿಸುತಿದ್ದನು. ಮಳೆಯನ್ನೂ, ಮಳೆಗಾಲವನ್ನೂ, ಮಳೆಯ ಕುರಿತಾದ ಕವನಗಳನ್ನು ಬಹಳವಾಗಿ ಮೆಚ್ಚುತಿದ್ದನು. ತನ್ನ ಬಂಗಾಳಿ ಭಾಷೆಯ ಮೂಲಪಾಠದಲ್ಲಿದ್ದ ಮಳೆಯ ದ್ವಿಪದಿಯೊಂದು ಅವನ ಮನಸ್ಸನ್ನು ಮೋಹಗೊಳಿಸಿತ್ತು. ಆ ಕವನದ ಕುಣಿತವು ರವೀಂದ್ರನ ಕಿವಿಯಲ್ಲಿ ಆಜೀವಪರ್ಯಂತ ಕೇಳಿಸುತಿತ್ತು. ಗೀತವದು ಹೀಗಿತ್ತು:

'ತಟಪಟ ಹನಿಯಪ್ಪ ಬರ್‍ತೈತೇ
ಪರಪರನೆ ಎಲೆಯೆಲ್ಲ ನಡುಗುತ್ತೈತೇ ॥ ೧ ॥

ತಟಪಟ ಹನಿಯಪ್ಪ ಬೀಳ್ತೈತೇ।
ನದಿಯಲ್ಲಿ ನೆರೆನೀರು ಬರ್ತೈತೇ' ॥ ೨ ॥

ಚಿಕ್ಕಂದಿನಿಂದಲೇ ಆತನಲ್ಲಿ ಲೋಕದ ಸೌಂದರ್ಯಾದ್ಭುತಗಳನ್ನು ತಿಳಿಯುವ ಪ್ರಬಲ ಶಕ್ತಿ ಇದ್ದಿತು. ಭೂಗರ್ಭಗಾಢಾಂಧಾಕಾರ, ಆಕಾಶದ ಅವರ್ಣನೀಯ ವಿಸ್ತಾರಗಳು ಆತನನ್ನು ವಿಸ್ಮಯಗೊಳಿಸಿದ್ದುವು. ಒಮ್ಮೆ ಅವುದೋ ಹಬ್ಬ; ಅಂಗಳದಲ್ಲಿ ಚಪ್ಪರವನ್ನು ಹಾಕುವುದಕ್ಕಾಗಿ ಆಳುಗಳು ಕುಣಿಗಳನ್ನು ತೋಡಿ ಕಂಬಗಳನ್ನು ನೆಡುತಿದ್ದರು. ಆ ಕುಣಿಗಳನ್ನು ಕಂಡು ರವಿ ಉದ್ವೇಗಗೊಳ್ಳುತಿದ್ದನು. ಆಳುಗಳು ಇನ್ನಷ್ಟು ಆಳಕ್ಕೆ ಕುಣಿಯನ್ನು ತೆಗೆಯುತಿದ್ದರೆ ನೆಲದಡಿಯಲ್ಲಿ ಅಡಗಿರುವ ಆಶ್ಚರ್ಯಕರವಾದ ಸಂಗತಿಗಳನ್ನು ತಿಳಿಯಬಹುದಿತ್ತು ಎಂದು ಅವನು ಭಾವಿಸುತಿದ್ದನು. ಬಾಲ್ಯದಿಂದಲೂ ಮಧ್ಯಾಹ್ನಕಾಲವನ್ನು ಬಹಳಷ್ಟು ಮೆಚ್ಚುತ್ತಿದ್ದನು. ಈ ಸಮಯದಲ್ಲಿ ನಗರವೆಲ್ಲ ಪ್ರಶಾಂತವಾಗಿರುತಿತ್ತು; ಮನೆಯವರೆಲ್ಲ ವಿಶ್ರಾಂತಿ ತೆಗೆದುಕೊಳ್ಳುತಿದ್ದರು. ಈ ಸುಸಂದರ್ಭದಲ್ಲಿ ಆಳುಗಳಿಂದ ತಪ್ಪಿಸಿಕೊಂಡು ಮನೆಯ ತುದಿಮಾಳಿಗೆಯನ್ನೇರಿ, ಕೊಠಡಿಯೊಂದನ್ನು ಸೇರಿ, ನೀಲಾಕಾಶವನ್ನೇ ನಿಟ್ಟಿಸುತ್ತಾ, ಬಹುದೂರ ಎತ್ತರದಲ್ಲಿ ಕೂಗುತ್ತಿರುವ ಗಿಡುಗನ ಕೂಗನ್ನು ತಲ್ಲೀನತೆಯಿಂದ ಆಲಿಸುತಿದ್ದನು.

## ಅಧ್ಯಾಯ ೨.

## ಶಾಲಾದಿನಗಳು

ಕೊನೆಗಂತೂ ಸೋಮೇಂದ್ರನೂ ಸತ್ಯನೂ ಶಾಲೆಗೆ ಹೊರಡುವ ದಿನ ಬಂದೇ ಬಿಟ್ಟಿತು. ರವಿ ಅವರಿಗಿಂತ ಎರಡು ವರ್ಷಗಳಿಗೆ ಸಣ್ಣವನಾಗಿದ್ದುದರಿಂದ ಇನ್ನೂ ಕೆಲವು ಕಾಲ ಮನೆಯಲ್ಲೇ ಇರಬೇಕೆಂದು ಹಿರಿಯರು ಭಾವಿಸಿದರು. ಆದರೆ ರವಿ ತಾನೂ ಹೋಗುವೆನೆಂದನು. ಶಾಲೆಗೆ ಹೋಗುವುದೆಂದರೆ ವಿಸ್ತಾರವಾದ ಸ್ವತಂತ್ರ ಜಗತ್ತಿಗೆ ಹೋದಂತೆ ಎಂಬುದು ಅವನ ಭಾವನೆಯಾಗಿತ್ತು. ಮನೆಯ ಬಂಧನದಿಂದ ತಪ್ಪಿಸಿಕೊಳ್ಳಲು ಇದೇ ಉತ್ತಮ ಉಪಾಯವೆಂದು ಬಗೆದನು. ಮನೆಯವರು 'ನೀನು ಭಾವಿಸುವಷ್ಟು ಸುಖವು ಅಲ್ಲಿ ದೊರಕಲಾರದು' ಎಂದು ಸ್ಪಷ್ಟೋಕ್ತಿಯನ್ನಾಡಿದರು. 'ಈಗ ಶಾಲೆಗೆ ಹೋಗಬೇಕೆಂದು ಅಳುತ್ತೀಯಾ;' ಎಂದನೊಬ್ಬ, 'ಮತ್ತೆ ಮನೆಯಲ್ಲೇ ಇರುತ್ತೇನೆಂದು ಇನ್ನೂ ಹೆಚ್ಚಾಗಿ ಕೂಗಲಿದ್ದೀಯಾ!' ರವಿ ಇದೊಂದನ್ನು ಕಿವಿಗೆ ಹಾಕಿಕೊಳ್ಳಲೇ

ಇಲ್ಲ; ಅಳುತ್ತಾ ಚಂಡಿತನಕ್ಕಾರಂಭಿಸಿಬಿಟ್ಟ. ಕೊನೆಯಲ್ಲಿ ಅವನಿಗೇ ಜಯ ವಾಯಿತು; ಒಡನಾಡಿಗಳೊಂದಿಗೆ ಹೋಗುವುದೆಂದು ಗೊತ್ತಾಯಿತು. ಅಲ್ಪಾವಧಿಯಲ್ಲೇ ತಾನು ದೊಡ್ಡ ತಪ್ಪುಮಾಡಿಬಿಟ್ಟೆನೆಂಬ ಅರಿವಾಯಿತು. ಆತನ ಪಾಲಿಗೆ ಶಾಲೆಯು ಮನೆಗಿಂತಲೂ ಕಠಿಣವಾದ ಇನ್ನೊಂದು ಸೆರೆಮನೆಯಾಗಿತ್ತು. ಆ ದಿನಗಳನ್ನು ಮತ್ತೆ ಸ್ಮರಿಸಿದಾಗ ರವೀಂದ್ರರು ಅದನ್ನು ತನ್ನ 'ಅಂಡಮಾನ ಗಳೆ'ಂದೇ ಕರೆದರು.

ಶಾಲೆಯು ಮಕ್ಕಳಿಗೆ ಅಭಿರುಚಿಜನ್ಯವೂ ಸಂತೋಷದಾಯಕವೂ ಆಗುವಂತೆ ಅಂದು ಯಾರೊಬ್ಬನೂ ಪ್ರಯತ್ನಿಸಲಿಲ್ಲ. ಬೆಳಗ್ಗೆ ಹತ್ತರಿಂದ ಸಂಜೆ ನಾಲ್ಕು ಗಂಟೆಗಳ ತನಕ ಒರಟಾದ ಬೆಂಚುಗಳುಳ್ಳ ಸೆರೆಮನೆಯಂತಿದ್ದ ಕೊಠಡಿಗಳಲ್ಲಿ ಮಕ್ಕಳನ್ನು ತುಂಬುತ್ತಿದ್ದರು. ಹುಡುಗನು ಪಾಠಗಳನ್ನು ಸರಿಯಾಗಿ ಒಪ್ಪಿಸದಿದ್ದರೆ ಬೆಂಚಿನ ಮೇಲೆ ನಿಂತು ಕೈಗಳನ್ನು ಮುಂದಕ್ಕೆ ನೀಡಿ ಭಾರವಾದ ಸ್ಲೇಟುಗಳನ್ನು ಹಿಡಿದುಕೊಂಡು ಉಪಾಧ್ಯಾಯನು ಸಾಕೆನ್ನುವವರೆಗೆ ಹಾಗೆಯೇ ನಿಲ್ಲಬೇಕಾಗಿತ್ತು. 'ಉಪಾಧ್ಯಾಯನು ಬೆತ್ತದ ಪ್ರತಿಮೂರ್ತಿಯಂತೆ ಕಾಣುತಿದ್ದನು' ಎನ್ನುತ್ತಾರೆ ರವೀಂದ್ರರು. ಶಾಲೆಯ ಇತರ ಮಕ್ಕಳೂ ಉಪಾಧ್ಯಾಯನಿಗಿಂತ ಹೆಚ್ಚು ಪ್ರೀತಿಸತಕ್ಕವರಾಗಿರಲಿಲ್ಲ. ಅವರಲ್ಲಿ ಹೆಚ್ಚಿನವರ ನಡತೆಯೂ ಸಂಭಾಷಣೆಯೂ ಪುಟ್ಟ ಠಾಗೋರ್ ಮಕ್ಕಳಿಗೆ ಬೇಸರವನ್ನುಂಟು ಮಾಡುತಿದ್ದುದರಿಂದ ಅವರೊಂದಿಗೆ ಸಖ್ಯವನ್ನು ಮಾಡಿರಲಿಲ್ಲ. ಅವರು ಈ ಶಾಲೆಯಲ್ಲಿ ಬಹುಕಾಲ ನಿಲ್ಲದೆ ಇನ್ನೊಂದು ಶಾಲೆಗೂ ಅಲ್ಲಿಂದ ಮೂರನೆಯ ಶಾಲೆಗೂ ಹೋದರು.

ಎಂಟೊಂಬತ್ತು ವರ್ಷದವನಾಗಿದ್ದ ರವೀಂದ್ರನಿಗೆ ಶಾಲಾದಿನಗಳು ಬಿಡುವಿಲ್ಲದ ದಿನಗಳಾಗಿದ್ದುವು. ಈ ವರ್ಷಗಳಲ್ಲಿ ದೇವೇಂದ್ರನಾಥನು ಆಗಾಗ ಮನೆಯಿಂದ ದೂರವಾಗಿರುತಿದ್ದನು; ಸುಮಾರು ಇಪ್ಪತ್ತೈದು ವರ್ಷದವನಾಗಿದ್ದ ರವೀಂದ್ರನ ಮೂರನೆಯ ಅಣ್ಣ ಹೇಮೇಂದ್ರನಾಥನು ಮಕ್ಕಳ ವಿದ್ಯಾಭ್ಯಾಸವನ್ನು ನೋಡಿಕೊಳ್ಳುತಿದ್ದನು. ಮಕ್ಕಳಿಗೆ ಯೋಗ್ಯ ಶಿಕ್ಷಣವನ್ನೀಯಬೇಕೆಂಬುದು ಅವನ ನಿರ್ಧಾರವಾಗಿತ್ತು. ಆದಿತ್ಯವಾರ ಹೊರತು ಉಳಿದ ದಿನಗಳಲ್ಲಿ ಮುಂಜಾನೆಯಿಂದ ಸಂಜೆಯವರೆಗೂ ಓದು ಸಾಗುತಿತ್ತು. ಚಳಿಗಾಲ ಸೆಕೆಗಾಲಗಳಲ್ಲಿ ಪಾಠಗಳು ಮುಂಜಾನೆ ಆರಂಭವಾಗುತಿದ್ದುವು. ರವೀಂದ್ರನಾಥನು ಬೆಳಕು ಹರಿದೊಡನೆ ಚಳಿಯಿಂದ ಗಡಗಡ ನಡುಗುತ್ತಾ ಎದ್ದು ನಿತ್ಯದ ಕುಸ್ತಿ ಅಭ್ಯಾಸಕ್ಕಾಗಿ ಆವರಣದ ಒಂದು ಮೂಲೆಗೆ ಹೋಗುತಿದ್ದನು. ಅಭ್ಯಾಸ ಮುಗಿದೊಡನೆ ಮನೆಯನ್ನು ಸೇರಿ ಉಡುಪನ್ನು ಧರಿಸಿಕೊಳ್ಳುತಿದ್ದನು.

ಏಳುಗಂಟೆಗೆ ಸರಿಯಾಗಿ ಖಾಸಗಿ ಶಿಕ್ಷಕನು (tutor) ಬೆಳಗ್ಗಿನ ಪಾಠಗಳನ್ನಾರಂಭಿಸುತಿದ್ದನು. ಮೂವರು ಮಕ್ಕಳು ಒಂದಾಗಿ ಕಲಿಯುತಿದ್ದರು; ಜೊತೆಯಲ್ಲಿ ಅಕ್ಕನೂ ಸೇರಿದ್ದಳು.

ಆಗಿನ ಕಾಲದಲ್ಲಿ ಬಂಗಾಳದಲ್ಲಿ ಪ್ರತಿಯೊಂದು ವಿಷಯವನ್ನು ಇಂಗ್ಲೀಷಿನಲ್ಲೇ ಕಲಿಸುವುದು ಸರ್ವಸಾಮಾನ್ಯವಾಗಿತ್ತು. ಆದರೆ ಹೇಮೇಂದ್ರನಾಥನಿಗೆ ಈ ಪದ್ಧತಿ ಹಿಡಿಸಲಿಲ್ಲ. ಅವನ ಅಪ್ಪಣೆಯಂತೆ ಬಂಗಾಳಿಯಲ್ಲಿಯೇ ಎಲ್ಲಾ ವಿಷಯಗಳೂ ಕಲಿಸಲ್ಪಡುತಿದ್ದುವು. ಮುಂದೆ ರವೀಂದ್ರನಾಥರು ಅಣ್ಣನ ವಿವೇಚನಾಪೂರ್ಣ ನಿರ್ಧಾರಕ್ಕಾಗಿ ಬಹಳ ಕೃತಜ್ಞರಾಗಿದ್ದರು. 'ಕಲಿಯುವುದು ತಿನ್ನುವಂತೆ' ಅವರೆಂದರು—'ಮೊದಲ ತುತ್ತು ರುಚಿಕರವಾಗಿದ್ದರೆ ಮಗು ಅತ್ಯಂತಾಸಕ್ತಿಯಿಂದ ಮತ್ತೂ ತಿನ್ನುವುದು, ಆದರೆ ಆ ಮೊದಲ ತುತ್ತು ಅಜೀರ್ಣಕಾರಿಯಾದ ವಿದೇಶೀಯ ಭಾಷೆಯೆಂಬ ಪರೆಯಿಂದ ಮುಸುಕಿದ್ದರೆ ಮಗುವಿನ ಹಸಿವು ಕೆಡುವುದರಲ್ಲಿ ಆಶ್ಚರ್ಯವೇನು!'

ಏಳರಿಂದ ಒಂಬತ್ತರ ತನಕ ಬಂಗಾಳಿ ಸಾಹಿತ್ಯ, ಗಣಿತಶಾಸ್ತ್ರ, ಶರೀರ ಶಾಸ್ತ್ರ ಹಾಗೂ ಇನ್ನುಳಿದ ಎಲ್ಲಾ ವಿಷಯಗಳನ್ನು ಕಲಿಯುತಿದ್ದರು. ಪ್ರಾಥಮಿಕ ವಿಜ್ಞಾನವನ್ನು ಕಲಿಸುವುದಕ್ಕೆ ಪ್ರತ್ಯೇಕ ಶಿಕ್ಷಕನಿದ್ದನು. ಈ ವಿಷಯದಲ್ಲಿ ರವೀಂದ್ರನಿಗೆ ವಿಶೇಷ ಆಸಕ್ತಿ. ಶಿಕ್ಷಕನು ಸಾಮಾನ್ಯ ವಸ್ತುಗಳಿಂದ ಎಲ್ಲಾ ರೀತಿಯ ಪ್ರತ್ಯಕ್ಷ ಪ್ರಯೋಗಗಳನ್ನು ಮಾಡಿತೋರಿಸುತಿದ್ದನು. ತನಗೆ ಕಾರಣಾಂತರಗಳಿಂದ ಎಂದಿನಂತೆ ಪಾಠಕ್ಕೆ ಬರಲಾಗದಿದ್ದರೆ ಬಹಳಷ್ಟು ನಿರಾಶೆಗೊಳ್ಳುತಿದ್ದನು. ಒಂಬತ್ತಕ್ಕೆ ಸ್ನಾನಮಾಡಿ ಊಟತೀರಿಸಿ ಶಾಲೆಗೆ ಹೊರಟರೆ ಮತ್ತೆ ಹಿಂತಿರುಗುವುದು ಸಂಜೆ ನಾಲ್ಕು ಗಂಟೆಗೆ. ಇಷ್ಟರಿಂದಲೇ ದಿನದ ಕೆಲಸ ಮುಗಿಯಲಿಲ್ಲ. ಶಾಲೆಯಿಂದ ಮರಳಿದೊಡನೆ ಒಂದು ಗಂಟೆಯಷ್ಟು ಕಾಲ ಕುಸ್ತಿಯಾಟ, ಮತ್ತೆ ಚಿತ್ರ ಬರೆಯುವುದು ಸಾಗುತಿತ್ತು. ರಾತ್ರಿಯ ಊಟವಾದ ಮೇಲೆ ಮುಸುಕಾದ ದೀಪವನ್ನು ಹಚ್ಚಿದಾಗ ಇಂಗ್ಲೀಷು ಶಿಕ್ಷಕರು ಹಾಜರಾಗುತಿದ್ದರು. ನಿದ್ದೆಗಣ್ಣಿನಲ್ಲಿದ್ದ ಪುಟ್ಟ ಬಾಲಕನು ಇಂಗ್ಲೀಷನ್ನು ದ್ವೇಷಿಸಿ ತುಸು ವಿಶ್ರಾಂತಿಯನ್ನು ಬಯಸಿದುದೇನೂ ಆಶ್ಚರ್ಯವಲ್ಲ! ಪಠ್ಯ ಪುಸ್ತಕಕ್ಕೆ ಹರಿದು ಕೊಳಕಾದ ಕಪ್ಪು ತಟ್ಟಿ ಇತ್ತು. ಪ್ರತಿ ಪಾಠದ ಆದಿಗೆ ದಪ್ಪ ಅಕ್ಷರದಲ್ಲಿ ಉಚ್ಚಾರಣೆಯ ಚಿಹ್ನೆಗಳುಳ್ಳ ಹೊಸ ಶಬ್ದಗಳ ಪಟ್ಟಿ ಕೊಡಲಾಗಿತ್ತು. ಅವನ್ನು ಕಂಡರೆ ಅವನಿಗೆಂತಹ ರೋಷ! ಸನೀನುಳ್ಳ ಕೋವಿಯನ್ನು ಸಜ್ಜಾಗಿ ಹಿಡಿದು ನಿಂತ ಯೋಧರಂತೆ ಅವು ಕಾಣುತಿದ್ದುವು! ಹೇಗೂ ರಾತ್ರಿ ಒಂಬತ್ತು ಗಂಟೆಗೆ ದಿನ ಮುಕ್ತಾಯವಾಗುತಿತ್ತು. ಕೂಡಲೇ

ತಾಯಿಯ ಕೋಣೆಗೆ ಓಡಿ ಕತೆ ಹೇಳೆಂದು ಕಾಡುತಿದ್ದನು. ಕತೆ ಆರಂಭವಾಗಿ ಮುಗಿಯುವುದಕ್ಕಿಂತ ಎಷ್ಟೋ ಮೊದಲೆ ನಿದ್ರಿಸುತಿದ್ದನು.

ಇಂತಹ ಹೊರಲಾರದ ಕಾರ್ಯಕ್ರಮದಿಂದ ರವೀಂದ್ರನಾಥನು ನಿತ್ಯ ದಣಿಯುತಿದ್ದನು ಮತ್ತು ರಜೆಯನ್ನು ಪಡೆಯುವುದಕ್ಕಾಗಿ ಒಂದಿಲ್ಲೊಂದು ಉಪಾಯವನ್ನು ಹುಡುಕುತಿದ್ದನು. ರವೀಂದ್ರನ ದುರದೃಷ್ಟವೋ ಎಂಬಂತೆ ಆ ಶಿಕ್ಷಕನು ದೃಢಕಾಯನಾಗಿದ್ದನು. ಒಂದು ದಿನವಾದರೂ ಕಾಯಿಲೆ ಬಿದ್ದವನಲ್ಲ. ಬಿರುಗಾಳಿ ಬೀಸಿದರೂ ಜಡಿಮಳೆ ಸುರಿದರೂ ತಪ್ಪದೆ ಬರುತಿದ್ದನು. ಹುಡುಗನಿಗೆ ರಜೆ ಬೇಕಾದರೆ ಹುಡುಗನೇ ಕಾಯಿಲೆಬೀಳಬೇಕಷ್ಟೆ! ಹೀಗಾಗಿ ರವಿ ತನಗೆ ಶೀತವೊ ಜ್ವರವೊ ಬರುವಂತೆ ಎಷ್ಟೆಲ್ಲ ಪ್ರಯತ್ನಪಟ್ಟರೂ ಸಾಧ್ಯ ವಾಗಲಿಲ್ಲ — ಜೋರಾಗಿ ಹಿಮಬೀಳುವ ಮಾಡಿನ ಮೇಲೆ ಮಲಗಿದರೂ ಜ್ವರ ಬರಲಿಲ್ಲ. ಬೇಕೆಂದೇ ಮಳೆಯಲ್ಲಿ ನಾಂದು ಬಂದರೂ ಶೀತವು ಬಾಧಿಸಲಿಲ್ಲ. ಮಕ್ಕಳಿಗೆ ಬರುವ ಸಿಡುಬು, ಕೋರ ಮುಂತಾದ ಯಾವುದೇ ರೋಗ ಅವನ ನ್ನೆಂದೂ ಬಾಧಿಸಿರಲಿಲ್ಲ. ಈ ಉಪಾಯಗಳಿಂದ ಪಾಠವನ್ನು ತಪ್ಪಿಸಲು ಆಗದಿರಲು ಕೆಲವೊಮ್ಮೆ ತನಗೆ ಹೊಟ್ಟೆನೋವೆಂದು ತಾಯಿಗೆ ಹೇಳುತಿದ್ದನು. ಮಗನ ಮಾತನ್ನು ಕೇಳಿ ತಾಯಿ ಮುಗುಳ್ನಕ್ಕು ಶಿಕ್ಷಕನು ಇಂದು ಬರುವುದು ಬೇಡವೆಂದು ಹೇಳಿಕಳುಹಿಸುತಿದ್ದಳು; ಆದರೆ ಮಗನ ಹೊಟ್ಟೆನೋವಿನ ಕಾರಣ ವನ್ನು ಆಕೆ ಚೆನ್ನಾಗಿ ಅರಿತಿದ್ದಳಾದುದರಿಂದಲೇ ಯಾವ ಔಷಧಿಯನ್ನೂ ಕೊಡುತ್ತಿರಲಿಲ್ಲ! ತನ್ನ ಈ ಬಗೆಯ ನಿರೋಗದೇಹಸ್ಥಿತಿಗೆ ಸರಳ ಮಿತಾಹಾರ ವನ್ನಿಕ್ಕುತಿದ್ದ ವ್ರಜೇಶ್ವರನೇ ಕಾರಣನಾಗಿರಬೇಕೆಂದು ರವೀಂದ್ರರು ಹೇಳುತಿದ್ದರು. 'ತಮ್ಮ ಮಕ್ಕಳು ಆರೋಗ್ಯವಂತರಾಗಿರಬೇಕಾದರೆ ತಾಯಂದಿರು ವ್ರಜೇಶ್ವರ ನಂತಹ ಸೇವಕನನ್ನಿಟ್ಟುಕೊಳ್ಳಬೇಕು.' ಅವರು ಹೇಳುತ್ತಾರೆ, 'ಸೇವಕನು ಆಹಾರದ ವೆಚ್ಚವನ್ನು ಕಡಿಮೆಮಾಡುವುದರೊಂದಿಗೆ ವೈದ್ಯಕೀಯ ವೆಚ್ಚವೇನೂ ಇಲ್ಲದಂತೆ ಮಾಡುವನು!'

'ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದನು' ಎಂಬ ಕಿರುಗತೆಯಲ್ಲಿ ರವೀಂದ್ರರೇ ಸ್ವಂತ ಮಾತುಗಳಲ್ಲಿ ಹೇಳಿದ ತನ್ನ ಬಾಲ್ಯದ ದಿನಗಳ ಸ್ಮರಣೆ ಯೊಂದನ್ನು ಇಲ್ಲಿ ಕಾಣಬಹುದು:—

'ಆ ಮೋಹಿನೀ ಕತೆಯು ಆರಂಭವಾದಂದಿನ ಕಲ್ಕತ್ತದ ಸಂಧ್ಯಾಕಾಲದ ಸ್ಪಷ್ಟ ಚಿತ್ರವು ಇನ್ನೂ ನನ್ನ ನೆನಪಿನಲ್ಲಿದೆ. ಮಳೆಗಾಳಿಗಳು ಎಡೆಬಿಡದೆ ಬರುತಿದ್ದುವು. ಕಲ್ಕತ್ತ ನಗರವೇ ನೆರೆಯಲ್ಲಿ ಮುಳುಗಿತ್ತು. ನಮ್ಮ ಓಣಿಯಲ್ಲಿ ಮೊಣಕಾಲಿನ ವರೆಗೆ ನೀರಾಗುತಿತ್ತು. ಆ ಸಂಜೆಯಾದರೂ ನನ್ನ ಖಾಸಗಿ

ಉಪಾಧ್ಯಾಯನು ಬಹುಮಟ್ಟಿಗೂ ಬರಲಾರನೆಂದು ಭಾವಿಸಿದ್ದೆ. ನಾನು ಜಗಲಿಯ ಮೂಲೆಯೊಂದರಲ್ಲಿ ಕಾಲ್ಮಣೆಯಲ್ಲಿ ಕುಳಿತು ಓಣಿಯ ಕಡೆಗೇ ನೋಡುತಿದ್ದೆ; ಎದೆಯ ಡಬಡಬ ಬಡಿತ ಜೋರಾಗುತಿತ್ತು. ಪ್ರತಿ ನಿಮಿಷವೂ ಮಳೆಯನ್ನೇ ನೋಡುತಿದ್ದೆ. ಅದು ಕಡಿಮೆಯಾಗುತ್ತಾ ಬಂದಾಗ ನನ್ನ ಸರ್ವಶಕ್ತಿಯಿಂದ "ಓ ದೇವರೇ! ದಯಮಾಡಿ ಏಳುವರೆ ಗಂಟೆ ಕಳೆಯುವ ತನಕ ಇನ್ನಷ್ಟು ಜೋರಾಗಿ ಮಳೆಯನ್ನು ಸುರಿಸು" ಎಂದು ಬೇಡಿಕೊಂಡೆ. ಏಕೆಂದರೆ ಒಂದು ಸಂಜೆ ಕಲ್ಕತ್ತದಂಥಾ ನಗರದ ಒಂದು ಮೂಲೆಯಲ್ಲಿ ತನ್ನ ಶಿಕ್ಷಕನ ಬಂಧನದಿಂದ ಬಿಡುಗಡೆ ಹೊಂದುವುದಕ್ಕಾಗಿ ಅಸಹಾಯನಾಗಿ ನಿರೀಕ್ಷಿಸುತಿದ್ದ ಬಾಲಕನ ರಕ್ಷಣೆಗಾಗಿಯೇ ಈ ಮಳೆ ಬಂದಿರಬೇಕಲ್ಲದೆ ಬೇರಾವುದಕ್ಕೂ ಇರಲಾರದು ಎಂಬುದು ನನ್ನ ದೃಢವಾದ ನಂಬಿಕೆಯಾಗಿತ್ತು.

ನನ್ನ ಪ್ರಾರ್ಥನೆಗೆ ಉತ್ತರರೂಪವಾಗಿಯೋ ಇಲ್ಲವೇ ಪ್ರಕೃತಿಯ ಕರ್ಕಶ ಸ್ವಭಾವಕ್ಕನುಸಾರವಾಗಿಯೋ ಮಳೆಯಂತೂ ಸುರಿಯುತ್ತಲೇ ಇತ್ತು.

ಆದರೆ ಅಯ್ಯೋ! ನನ್ನ ಶಿಕ್ಷಕರು!

ನಿಶ್ಚಿತ ನಿಮಿಷಕ್ಕೆ ಸರಿಯಾಗಿ ಓಣಿಯ ತಿರುವಿನಲ್ಲಿ ಬರುತ್ತಿರುವ ಅವರ ಕೊಡೆಯನ್ನು ನೋಡಿದೆ. ನನ್ನ ಮಹದಾಶೆಯ ಗುಳ್ಳೆಯು ಎದೆಯಲ್ಲೇ ಒಡೆದು ಕಂಗಾಲಾಗಿಬಿಟ್ಟೆ. ಮರಣಾನಂತರ ಅಪರಾಧಕ್ಕೆ ತಕ್ಕ ಶಿಕ್ಷೆಯು ಇರುವು ದಾದರೆ ಮುಂದಿನ ಜನ್ಮದಲ್ಲಿಯಾದರೂ ನನ್ನ ಸ್ಥಾನವನ್ನು ಶಿಕ್ಷಕರೂ ಅವರ ಸ್ಥಾನವನ್ನು ನಾನೂ ಹೊಂದುವುದು ಖಂಡಿತ!

ಅವರ ಕೊಡೆಯನ್ನು ನೋಡಿದೆನೋ ಇಲ್ಲವೋ, ಥಟ್ಟನೆ ಅಲ್ಲಿಂದೆದ್ದು ತಾಯಿಯ ಕೊಠಡಿಗೆ ಓಡಿದೆನು. ಅಲ್ಲಿ ತಾಯಿಯೂ ಅಜ್ಜಿಯೂ ಎದುರುಬದು ರಾಗಿ ಕುಳಿತು ದೀಪದ ಬೆಳಕಿನಲ್ಲಿ ಇಸ್ಪೇಟು ಆಡುತಿದ್ದರು. ಕೋಣೆಯೊಳಕ್ಕೆ ಓಡಿದವನು ತಾಯಿಯ ಹಾಸಿಗೆಯಲ್ಲಿ ಬಿದ್ದುಕೊಂಡೆನು. ಮತ್ತು ಹೀಗೆ ಹೇಳಿದೆನು:—

"ಅಮ್ಮಾ! ಉಪಾಧ್ಯಾಯರು ಬಂದಿದ್ದಾರೆ. ನನಗೋ ಸಹಿಸಲಸಾಧ್ಯವಾದ ಕೆಟ್ಟ ತಲೆನೋವಾಗುತ್ತಿದೆ. ಇಂದು ಪಾಠವಿಲ್ಲದಿದ್ದರೆ ಆಗದೇ?"

ಪ್ರಾಯಕ್ಕೆ ಬಾರದ ಯಾವ ಮಗುವಿಗೂ ಈ ಕತೆಯನ್ನೋದಲು ಬಿಡ ಬಾರದೆಂದು ನಾನು ಆಶಿಸುತ್ತೇನೆ. ಏಕೆಂದರೆ ನಾನು ಅಂದು ಮಾಡಿದುದು ಶುದ್ಧ ತಪ್ಪು ಕೆಲಸ; ಆದರೆ ತಪ್ಪಿಗೆ ತಕ್ಕ ಶಿಕ್ಷೆಯೂ ನನಗೆ ಸಿಗಲಿಲ್ಲ. ಬದಲಾಗಿ ನನ್ನ ದುಷ್ಟ ವರ್ತನೆಗೇ ಜಯ ಲಭಿಸಿತ್ತು.



ಒಂಬತ್ತನೆಯ ಪ್ರಾಯದಲ್ಲಿ ರವೀಂದ್ರನು (ಎಡಬದಿಯಲ್ಲಿ)

"ಹಾಗೆಯೇ ಆಗಲಿ" ಎಂದಳು ಅಮ್ಮ. ಮತ್ತೆ ಆಳನ್ನು ಕರೆದು "ಶಿಕ್ಷಕರು ಇಂದು ಮನೆಗೆ ಮರುಳಬಹುದೆಂದು ಹೇಳು" ಎಂದಳು.

ಆಕೆ ನನ್ನ ಅಸ್ವಸ್ಥತೆಯನ್ನು ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲವೆಂಬುದು ನನಗೆ ಚೆನ್ನಾಗಿ ಗೊತ್ತಿತ್ತು. ಏಕೆಂದರೆ ಆಕೆ ಮೊದಲಿನಂತೆ ತನ್ನ ಆಟದಲ್ಲೇ ಮಗ್ನಳಾಗಿದ್ದಳು; ಮಾತ್ರವಲ್ಲ ನನ್ನ ಗೋಜಿಗೇ ಬರಲಿಲ್ಲ. ನಾನು ಕೂಡ ತಲೆಗಿಂಬಿನಲ್ಲಿ ತಲೆಯನ್ನಿಟ್ಟು ಹೊಟ್ಟೆ ಹುಣ್ಣಾಗುವಂತೆ ನಕ್ಕೆನು. ನಾವು ತಾಯಿಮಕ್ಕಳು ಒಬ್ಬರನ್ನೊಬ್ಬರು ಸರಿಯಾಗಿ ಅರ್ಥಮಾಡಿಕೊಂಡಿದ್ದೆವು.'

ರವೀಂದ್ರನಾಥರು ತಮ್ಮ ಶಾಲಾದಿನಗಳ ಹಲವು ವಿನೋದಕರವಾದ ಕತೆಗಳನ್ನು ಹೇಳುತ್ತಾರೆ. 'ಠಾಗೋರ್ ಕುಟುಂಬದವರೆಲ್ಲ ಸ್ಫುರದ್ರೂಪಿಗಳಾಗಿದ್ದರು; ಹುಟ್ಟಿದ ಮಕ್ಕಳನ್ನೆಲ್ಲ ಯುರೋಪಿಯನರಂತೆ ಕಾಣಲು ಮದ್ಯದಲ್ಲಿ ಸ್ನಾನ ಮಾಡಿಸುತ್ತಾರೆ' ಎಂಬುದಾಗಿ ಶಾಲಾಮಕ್ಕಳೆಲ್ಲ ಅವರನ್ನು ಅಣಕಿಸುತಿದ್ದರು. ಕಲ್ಕತ್ತದ ಶಾಲೆಗೆ ಹೋಗಿ ಕಲಿತ ಭಾರತದ ಹುಡುಗಿಯರಲ್ಲಿ ರವಿಯ ಹಿರಿಯಕ್ಕನೇ ಮೊದಲಿಗಳು. ಒಂದು ದಿನ ಪಲ್ಲಕಿಯಲ್ಲಿ ಕುಳಿತು ಹೋಗುತಿದ್ದ ಆಕೆಯನ್ನು ಪೋಲೀಸರು ತಡೆದು ನಿಲ್ಲಿಸಿದರು. ಆಕೆ ಅಪಹರಿಸಲ್ಪಟ್ಟ ಯಾವಳೋ ಆಂಗ್ಲೇಯ ಹುಡುಗಿಯಾಗಿರಬೇಕೆಂದು ಅವರು ಭಾವಿಸಿದ್ದರು!

ಮಕ್ಕಳ ಶಾಲಾನುಯಾಯಿಗಳಲ್ಲಿ ಹಿರಿಯನೊಬ್ಬನು ತನ್ನ ಇಂದ್ರಜಾಲ ವಿದ್ಯೆಯ ಹೆಗ್ಗಳಿಕೆಯನ್ನು ಕೊಚ್ಚಿಕೊಳ್ಳುತಿದ್ದನು. ತಾನು ಮಾಡಿದ್ದ ಎಲ್ಲ ಅದ್ಭುತ ಪ್ರಯೋಗಗಳನ್ನು ವರ್ಣಿಸಿ ಹೇಳುತಿದ್ದನು. ಆತನ ಹೇಳಿಕೆಯಲ್ಲಿ ಸತ್ಯಾಂಶವಿದೆಯೇ ಎಂಬುದನ್ನು ಸ್ವಂತ ಪ್ರಯೋಗದಿಂದ ತಿಳಿಯಲು ರವೀಂದ್ರನು ಬಹಳ ತವಕಿತನಾಗಿದ್ದನು; ಆದರೆ ಅಗತ್ಯವಾಗಿ ಬೇಕಾಗಿದ್ದ ವಸ್ತುಗಳು ಹೆಚ್ಚಾಗಿ ಸಿಗುತಿದ್ದಿಲ್ಲ. 'ಯಾವುದೇ ಬೀಜವನ್ನು ಪಾಪಸು ಕಳ್ಳಿಯ ರಸದಲ್ಲಿ ಅದ್ದಿ ಒಣಗಿಸಬೇಕು. ಹೀಗೆ ಇಪ್ಪತ್ತೊಂದು ಬಾರಿ ಮಾಡಿದಾಗ ಅದು ಗಿಡವಾಗಿ ಒಂದು ಗಂಟೆಯೊಳಗೆ ಫಲ ಬಿಡುವುದು!' ಹೀಗೆ ಐಂದ್ರಜಾಲಿಕನು ಹೇಳಿದ್ದನು. ಕೊನೆಗೆ ಇದೊಂದು ಪ್ರಯೋಗವನ್ನಾದರೂ ಮಾಡಿಯೇ ತೀರುವೆನೆಂದು ನಿಶ್ಚೈಸಿದನು! ಕೂಡಲೇ ತೋಟಗಾರನಿಂದ ಪ್ರಯೋಗಕ್ಕೆ ಬೇಕಾದ ರಸವನ್ನು ಸಂಗ್ರಹಿಸಿ ಮಾವಿನ ಗೊರಟೊಂದನ್ನು ಆ ರಸದಲ್ಲಿ ಅದ್ದಿ ಒಣಗಿಸುವ ಕೆಲಸದಲ್ಲಿ ನಿರತನಾದನು. ಪಾಪ, ಅವನಿಗೆ ಮಾವಿನ ಹಣ್ಣೊಂದೂ ದೊರಕಲಿಲ್ಲವೆಂದು ಹೇಳಬೇಕಾದ್ದಿಲ್ಲವಷ್ಟೆ!

ರವಿ ಕುತೂಹಲಿಯಾಗಿ ತನ್ನ ಮಾವಿನ ಗೊರಟನ್ನೇ ನೋಡುತಿದ್ದುದರಿಂದ ಪಕ್ಕದಲ್ಲಿದ್ದ ಸತ್ಯನೂ ಐಂದ್ರಜಾಲಿಕನೂ ಏನುಮಾಡುತ್ತಿದ್ದರೆಂಬುದನ್ನು

ಗಮನಿಸಲೇ ಇಲ್ಲ. ಆಗಾಗ ರವಿಯ ಕಡೆ ನೋಡುತ್ತ ಅತ್ಯಾಸಕ್ತಿಯಿಂದ ಏನನ್ನೋ ಆಡಿಕೊಳ್ಳುತಿದ್ದರು. ಮರುದಿನ ಶಾಲೆಯಲ್ಲಿ ತನಗೊಂದು ವೈಜ್ಞಾನಿಕ ಸಂಶೋಧನೆಯಾಗಬೇಕೆಂದೂ ಅದಕ್ಕಾಗಿ ಪ್ರತಿಯೊಬ್ಬನೂ ಸರದಿಯಂತೆ ಒಂದು ಬೆಂಚನ್ನು ಹಾರಬೇಕೆಂದೂ ಆಗ ತಾನು ಜಾಗರೂಕತೆಯಿಂದ ನೀರಿಕ್ಷಿಸಬೇಕೆಂದೂ ಐಂದ್ರಜಾಲಿಕನು ಹೇಳಿದನು. ಹೇಳಿಕೆಯಂತೆ ಎಲ್ಲರೂ ಹಾರಿದರು. ಅವರಲ್ಲಿ ರವಿಯೂ ಇದ್ದನು. ಐಂದ್ರಜಾಲಿಕನು ತಲೆಯನ್ನಲ್ಲಾಡಿಸುತ್ತಾ 'ಆಹಾ!' ಎಂದು ಉದ್ಗಾರವೆತ್ತಿದನು.

ಇದು ನಡೆದ ಕೆಲವು ದಿನಗಳ ಅನಂತರ ಆತನು ಸತ್ಯನನ್ನೂ ರವಿಯನ್ನೂ ತನ್ನ ಮನೆಗೆ ಆಹ್ವಾನಿಸಿದನು. ಅವರಿಗೆ ಹೋಗುವುದಕ್ಕೆ ಅನುಮತಿಯೂ ದೊರಕಿತ್ತು. ಅಲ್ಲಿ ತುಂಬಾ ಮಂದಿ ಕುಳಿತಿದ್ದರು. ಅವರು ರವಿಯನ್ನು ಹಾಡುವಂತೆ ಕೇಳಿಕೊಂಡರು. ಅವನ ಮಧುರ ಗಾನವನ್ನು ಕೇಳಿ ಎಲ್ಲರೂ ಆಶ್ಚರ್ಯಗೊಂಡರು. ಹಾಡು ಮುಗಿದ ಮೇಲೆ ಲಘೂಪಹಾರ ಬಂದಿತು. ಅಷ್ಟೊಂದು ಮಂದಿಯ ಮುಂದೆ ತಿನ್ನಲು ರವಿ ಬಹಳ ನಾಚಿದನು; ಅಲ್ಲದೆ ವ್ರಜೇಶ್ವರನ ಉಪಕಾರ, ಅವನು ತಿಂಡಿಗಾಗಿ ಎಂದೂ ಆಸೆಪಟ್ಟವನಲ್ಲ. ಆದುದರಿಂದ ಬಹು ಸ್ವಲ್ಪ ಮಾತ್ರ ತಿಂದನು. ಮರುದಿನ ಐಂದ್ರಜಾಲಿಕನಿಂದ ತನಗೊಂದು ಪತ್ರ ಬಂದುದನ್ನು ನೋಡಿ ಆಶ್ಚರ್ಯಗೊಂಡನು. ಪತ್ರವನ್ನು ತೆರೆದು ನೋಡಿದಾಗ ಅತ್ಯಾಶ್ಚರ್ಯವಾಯಿತು. ಕಾರಣ ಅದೊಂದು ಪ್ರಣಯ ಪತ್ರವಾಗಿತ್ತು! ಆಗ ಸತ್ಯನು ತಾನು ಆಡಿದ್ದ ತಂತ್ರವನ್ನು ವಿವರಿಸಿ ಹೇಳಿದನು. ಪುಟ್ಟ ರವಿ ಮಾವಿನ ಗೊರಟಿನಲ್ಲಿ ತತ್ಪರನಾಗಿದ್ದಾಗ ಸತ್ಯನು ಐಂದ್ರಜಾಲಿಕನೊಡನೆ ಬೃಹದ್ರಹಸ್ಯವನ್ನು ಹೇಳುವವನಂತೆ—ರವಿ ನಿಜವಾಗಿಯೂ ಹುಡುಗಿ ಎಂದೂ ಯೋಗ್ಯ ಶಿಕ್ಷಣವನ್ನು ಪಡೆಯುವುದಕ್ಕಾಗಿ ಆಕೆಗೆ ಹುಡುಗನ ವೇಷವನ್ನು ಹಾಕಲಾಗಿದೆ ಎಂದೂ ಹೇಳಿದ್ದನು. ಮಕ್ಕಳು ಬೆಂಚನ್ನು ಹಾರಿದಾಗ ರವಿ ಎಡಗಾಲನ್ನು ಮುಂದುಮಾಡಿ ಹಾರಿದ್ದನು. ಹೀಗೆ ಹಾರುವುದು ಹುಡುಗಿಯರು ಮಾತ್ರವೇ ಎಂದೂ ಹೇಳಿದ್ದನು. ಜೊತೆಗೆ ಆತನಲ್ಲಿ ಶಿಶುಸ್ವಾಭಾವಿಕವಾದ ಸುಮಧುರ ಕಂಠ, ಅಲ್ಪ ಹಸಿವು ಮತ್ತು ಮುದ್ದಾದ ರೂಪವೂ ಇದ್ದುವು. ಇವುಗಳಿಂದೆಲ್ಲ ರುಜುವಾತು ಸಂಪೂರ್ಣವಾಗಿತ್ತು. ಸತ್ಯನು ಸತ್ಯವನ್ನೇ ಆಡಿದ್ದನೆಂದು ಐಂದ್ರಜಾಲಿಕನು ನಂಬಿದ್ದನು!

ಈ ಶಾಲಾದಿನಗಳಲ್ಲಿ ರವೀಂದ್ರನಾಥನು ಬಾಲಕ ಸಹಜವಾದ ದೊಡ್ಡ ಬರಹಗಳಲ್ಲಿ ಪದ್ಯರಚನೆ ಮಾಡತೊಡಗಿದನು. ಉತ್ತಮ ಸ್ವಭಾವದ ಕಾರಕೂನರು ಕೊಟ್ಟಿದ್ದ ಅಭ್ಯಾಸ ಪುಸ್ತಕವೆಲ್ಲ ಬೇಗನೆ ಪೂರ್ಣವಾಯಿತು. ತಾನು ರಚಿಸಿದ

ಪದ್ಯಗಳನ್ನು ಮನೆಯಲ್ಲಿ ಎಲ್ಲರಿಗೂ ಕೇಳುವಂತೆ ಎಳ್ಳಷ್ಟೂ ನಾಚಿಕೆಪಡದೆ ಗಟ್ಟಿಯಾಗಿ ಓದಿಹೇಳುತಿದ್ದನು. 'ಯೋಗ್ಯ' ಕವಿತೆಯು ಗಂಭೀರಪದಪುಂಜ ರಂಜಿತವಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದನು. ಒಂದು ದಿನ ಹಳೆಯ ಗ್ರಂಥವೊಂದರಲ್ಲಿ 'ದ್ವಿರೇಫ'ವೆಂಬ ಶಬ್ದವನ್ನು ನೋಡಿ ಅತ್ಯಾನಂದಗೊಂಡನು. ಈ ಶಬ್ದವು ಈಗ ರೂಢಿಯಲ್ಲಿಲ್ಲ. ಇದರ ಅರ್ಥ 'ತುಂಬಿ' ಈ ಶಬ್ದವು ಆಗಲೇ ಅವನ ಒಂದು ಪದ್ಯದಲ್ಲಿ ನುಸುಳಿಕೊಂಡಿತು; ಪದ್ಯವನ್ನು ಕುಟುಂಬದ ಗೆಳೆಯ ನೊಬ್ಬನ ಮುಂದೆ ಓದಿದನು. 'ಬಹಳ ಚೆನ್ನು' ಮುಗುಳ್ನಗುತ್ತಾ ಅವನೆಂದನು 'ಆದರೆ ದ್ವಿರೇಫವೆಂದರೇನು?' ತಾನು ಯಾವ ಶಬ್ದಕ್ಕಾಗಿ ಅಷ್ಟೊಂದು ಹೆಮ್ಮೆ ಗೊಂಡಿದ್ದನೋ ಅದನ್ನೇ ಈತನು ಹೀಗೆ ಹಾಸ್ಯಮಾಡಿದುದಕ್ಕಾಗಿ ರವಿ ಬಹಳ ಸಿಟ್ಟುಗೊಂಡನು. ತಾನು ಹನ್ನೊಂದು ವರ್ಷದವನಾಗಿದ್ದಾಗಲೇ ಸುಖಕ್ಕಿಂತಲೂ ದುಃಖವೇ ಕವಿತೆಗೆ ಯೋಗ್ಯ ವಸ್ತುವೆಂಬುದನ್ನು ಮನಗಂಡಿದ್ದನು. ನಿಜಕ್ಕೂ ದುಃಖವೆಂದರೇನೆಂದು ಸ್ವಲ್ಪವೂ ತಿಳಿಯದ ಆತನು 'ಜಗದ ದುಃಖ'ದ ಕುರಿತಾದ ಪದ್ಯಗಳನ್ನು ಬರೆಯುತಿದ್ದನು. ಇದು ತಂದೆ ದೇವೇಂದ್ರನಾಥನನ್ನು ತುಂಬಾ ಉಲ್ಲಾಸಗೊಳಿಸಿತ್ತು; ಆದರೂ ತನ್ನ ಈ ಪುಟ್ಟ ಮಗನ ದೈವದತ್ತವಾದ ಕವಿತಾ ಶಕ್ತಿಯು ಆತನನ್ನು ಮಹಾಕವಿಯನ್ನಾಗಿ ಮಾಡಬಲ್ಲುದೇ ಇಲ್ಲವೇ ಎಂದು ಕೌತುಕಗೊಂಡಿದ್ದನು.

ಮನೆಯವರೆಲ್ಲ ತಮ್ಮ ಸಂತೋಷಾಸಕ್ತಿಗಳನ್ನು ಸೂಚಿಸುವ ಮಂದಹಾಸ ವನ್ನು ಬೀರಿದರು. ಶಾಲೆಯಲ್ಲಿ ಇದರ ಬಗೆಯೇ ಬೇರೆಯಾಗಿತ್ತು. ಹುಡುಗನ ಕವಿತಾಪ್ರತಿಭೆಯನ್ನು ತಿಳಿದ ಮುಖ್ಯೋಪಾಧ್ಯಾಯರು ಒಮ್ಮೆ ಪದ್ಯವೊಂದನ್ನು ರಚಿಸಲು ಹೇಳಿದರು. ವಿಷಯವನ್ನು ಉಪಾಧ್ಯಾಯರೇ ಆರಿಸಿದರು; ಅದು ನೀತಿಪ್ರದವಾಗಿರತಕ್ಕದ್ದೆಂದು ಗೊತ್ತಾಯಿತು. ವಿಧೇಯ ರವೀಂದ್ರನಾಥನು ಮರುದಿನ ಕವಿತೆಯನ್ನು ರಚಿಸಿ ತಂದಾಗ ಅದನ್ನು ಹಿರಿಯ ತರಗತಿಯ ಮುಂದೆ ಓದುವಂತೆ ಹೇಳಿದರು. ಅವನು ಹಾಗೆಯೇ ಮಾಡಿದನು. ಆದರೆ ಮಕ್ಕಳು ತಮ್ಮ ಈ ಚಿಕ್ಕ ಪೋರನೇ ಇದನ್ನು ಬರೆದನೆಂಬುದನ್ನು ನಂಬದಾದರು. ಯಾವುದೋ ಪುಸ್ತಕದಿಂದ ಕದ್ದಿರಬೇಕೆಂದರು. 'ಈ ನೀತಿ ಪದ್ಯದ ಕುರಿತು ಹೊಗಳತಕ್ಕ ವಿಷಯವೆಂದರೆ' ರವೀಂದ್ರನಾಥರು 'ನೆನಪುಗಳು' ಎಂಬ ಪುಸ್ತಕ ದಲ್ಲಿ ಬರೆಯುತ್ತಾರೆ (ಅದು ಫಕ್ಕನೆ ಅದೃಶ್ಯವಾದುದೇ!) 'ಅದರ ನೀತಿಯ ಪರಿಣಾಮವು ತರಗತಿಯ ಮಕ್ಕಳಲ್ಲಿ ಉಂಟಾಗಲಿಲ್ಲ . . . . ಅವರಲ್ಲಿ ಹೆಚ್ಚಿ ನವರೂ ಅದು ನನ್ನ ಸ್ವಂತ ರಚನೆ ಎಂದು ನಂಬಲಿಲ್ಲ. ಒಬ್ಬನು ಪ್ರತಿಮಾಡಿದ್ದ ಪುಸ್ತಕವನ್ನು ತಂದು ತೋರಿಸುವೆನೆಂದನು. ಆದರೆ ಯಾರೂ ಅವನನ್ನು

ತರುವಂತೆ ಒತ್ತಾಯಪಡಿಸಲಿಲ್ಲ—ನಂಬಬೇಕೆನ್ನುವವರಿಗೆ ರುಜುವಾತೆಂಬುದು ದೊಡ್ಡ ಪೀಡೆಯೇ!'

ರವೀಂದ್ರನಾಥನಿಗೆ ಅವಿಶ್ರಾಂತ ಶಾಲಾದಿನಗಳು ಬೇಸರವಾಗಿತ್ತಾದರೂ ಆಗಾಗ ಕೆಲವೊಂದು ಚಿತ್ತಾಕರ್ಷಕ ಸಂಗತಿಗಳು ಬೇಸರವನ್ನು ತಡೆಗಟ್ಟುತಿದ್ದುವು. ಅವನ ಅಣ್ಣಂದಿರು ನಟನೆಯಲ್ಲಿ ಬಹಳ ಅಭಿರುಚಿಯುಳ್ಳವರಾಗಿದ್ದರು. ಆಗಾಗ ಖಾಸಗಿ ಮನೋರಂಜಕ ಕಾರ್ಯಕ್ರಮಗಳನ್ನು ಗೆಳೆಯರೊಂದಿಗೆ ಸೇರಿ ಮಾಡುತಿದ್ದರು. ಸಣ್ಣವರಿಗೆ ಅಲ್ಲಿ ಪ್ರವೇಶವಿದ್ದಿಲ್ಲ. ರವಿಯೂ ಇತರ ಮಕ್ಕಳೂ ದೂರದ ಜಗಲಿಯಲ್ಲಿ ನಿಂತುಕೊಂಡು ಅಲ್ಲಿಗೆ ಬರುವವರನ್ನು ನೋಡುತ್ತಾ ಏನೇನು ನಡೆಯುವುದೆಂಬುದನ್ನು ಕೇಳಲು ಪ್ರಯತ್ನಿಸುತಿದ್ದರು. ಆದರೆ ಒಮ್ಮೆ ನಾಟಕ ಕಂಪೆನಿಯವರು ಹೊರಗೆ ಅಂಗಣದಲ್ಲಿ 'ನಳದಮಯಂತಿ' ನಾಟಕವನ್ನಭಿನಯಿಸುತಿದ್ದರು. ಇದನ್ನು ನೋಡಲು ಮಕ್ಕಳೆಲ್ಲ ಹೋಗಬಹುದೆಂದು ಗೊತ್ತಾಗಿತ್ತು. ನಾಟಕವು ತಡವಾಗಿ ಆರಂಭವಾಗಿತ್ತಾದ ಕಾರಣ ಮಕ್ಕಳೆಲ್ಲ ಎಂದಿನಂತೆ ನಿದ್ದೆಹೋದರು. ಹೊರಡುವ ಸಮಯಕ್ಕೆ ಸರಿಯಾಗಿ ಅವರನ್ನು ಎಬ್ಬಿಸುವುದಾಗಿ ದೊಡ್ಡವರು ನಂಬಿಸಿದ್ದರು. ರವಿ ಬಹಳ ಉತ್ಸುಕನಾಗಿದ್ದನು; ಮನಸ್ಸಿಲ್ಲದ ಮನಸ್ಸಿನಿಂದ ಮಲಗಿದನು. ಅವನಿಗೆ ಈ ದೊಡ್ಡವರ ನಂಬಿಕೆಯ ಮಾತಿನಲ್ಲಿ ವಿಶ್ವಾಸವಿರಲಿಲ್ಲ! ಹೇಗಿದ್ದರೂ ಎಲ್ಲವೂ ಚೆನ್ನಾಗಿಯೇ ನಡೆಯಿತು. ಎಲ್ಲರೂ ದೀಪಗಳಿಂದ ಜಗಜಗಿಸುತ್ತಿದ್ದ ಅಂಗಳಕ್ಕೆ ಬಂದರು. ರವಿ ತನ್ನ ಅಣ್ಣಂದಿರೊಂದಿಗೆ ಬಂದು ಕುಳಿತನು. ಅಣ್ಣಂದಿರು ನಾಟಕದ ಮಧ್ಯದಲ್ಲಿ ಅತ್ಯುತ್ತಮ ನಟರನ್ನು ಗೌರವಿಸುವುದಕ್ಕಾಗಿ ರಂಗಭೂಮಿಯ ಮೇಲೆ ಎಸೆಯಲು ರವಿಗೆ ಸ್ವಲ್ಪ ಮಾತ್ರ ಹಣವನ್ನು ಕೊಟ್ಟಿದ್ದರು. 'ಆಹಾ! ಆಶ್ಚರ್ಯ, ಆಶ್ಚರ್ಯ!' ನಾಟಕವಾದರೋ ಸುದೀರ್ಘವಾಗಿತ್ತು. ಪೂರ್ತಿಯಾಗುವುದರೊಳಗೆ ರವಿ ಗಾಢನಿದ್ದೆಹೋಗಿದ್ದುದರಿಂದ ಅವನನ್ನು ಎತ್ತಿಕೊಂಡುಹೋಗಿ ಮಲಗಿಸಬೇಕಾಯಿತು.

ಇನ್ನೊಂದು ಮಹತ್ವದ ಮರೆಯಲಾಗದ ದಿನ; ದರೋಡೆಖೋರರ ತಂತ್ರಪ್ರದರ್ಶನವೊಂದು ಅಂಗಳದಲ್ಲಿ ನಡೆದಿತ್ತು. ದರೋಡೆಖೋರರ ಶಕ್ತಿ ಸಾಮರ್ಥ್ಯಗಳನ್ನು ಆಳುಗಳು ಹೇಳುತಿದ್ದ ಕತೆಗಳಲ್ಲಿ ರವಿ ಕೇಳಿದ್ದನು. ಈಗ ಈ ಕ್ರೂರ ವ್ಯಕ್ತಿಗಳನ್ನು ಪ್ರತ್ಯಕ್ಷ ನೋಡಿದನು. ಅವರು ಕೋಲುಗಳ ತುದಿಗೆ ಹಾರಿ ಎರಡನೆಯ ಮಾಳಿಗೆಯನ್ನು ಮುಟ್ಟುತಿದ್ದರು; ಮರಗಾಲುಗಳಲ್ಲಿ ನಡೆಯುತಿದ್ದರು; ಭಾರವಾದ ವಸ್ತುಗಳನ್ನು ಲಘುವಾಗಿ ಎತ್ತಿಹಾಕುತಿದ್ದರು ಮತ್ತು ಆಶ್ಚರ್ಯಕರವಾದ ಕುಸ್ತಿಯಾಟಗಳನ್ನಾಡುತಿದ್ದರು.

ಅತ್ತಿಗೆಯೊಬ್ಬಳು ಹೊಸತಾಗಿ ಮನೆಗೆ ಬಂದಳು. ಅಂದಿನಿಂದ ರವಿಯ ಜೀವನದಲ್ಲಿ ಇನ್ನೊಂದು ಬಗೆಯ ಅಭಿರುಚಿಯುಂಟಾಯಿತು. ಆಕೆ ತನ್ನ ಪುಟ್ಟ ಮೈದುನನನ್ನು 'ಬೊಂಬೆಗಳ ಮದುವೆ'ಗೆ ಆಮಂತ್ರಿಸುವುದರಿಂದ ಅವನ ಪ್ರೀತಿಯನ್ನು ಸಂಪಾದಿಸಿಕೊಂಡಳು. ಈ ಸಮಾರಂಭಗಳಲ್ಲಿ ಆಕೆ ರುಚಿರುಚಿಯಾದ ನಾನಾ ಭಕ್ಷ್ಯಗಳನ್ನು ಮಾಡುತಿದ್ದಳು. ಹುಡುಗನು ಅವುಗಳನ್ನು ತಿಂದು ಆನಂದಪಡುತಿದ್ದುದನ್ನು ನೋಡಲು ಇಷ್ಟಪಡುತಿದ್ದಳು. ವ್ರಜೇಶ್ವರನು ಕೊಡುತಿದ್ದ ತಿನಿಸಿಗಿಂತ ಇದು ಸಂಪೂರ್ಣ ಭಿನ್ನವಾಗಿತ್ತು! ಇಬ್ಬರೂ ಒಂದಾಗಿ ಕಾಡುತ್ತ, ಆಡುತ್ತ, ಹಾಸ್ಯಮಾಡುತ್ತ ತಮ್ಮ ಸಮಯವನ್ನು ಆನಂದದಿಂದ ಕಳೆಯುತಿದ್ದರು. ಅಣಕಿಸುತ್ತಿದ್ದ ಆಕೆ ತನ್ನನ್ನೇ ವಿಮರ್ಶೆಗೆ ಗುರಿಮಾಡಿಕೊಂಡಳು. ಅವನ ರೂಪಿನಲ್ಲಾಗಲಿ, ಬರವಣಿಗೆಯಲ್ಲಾಗಲಿ, ಕವನಗಳಲ್ಲಾಗಲಿ ಆಶ್ಚರ್ಯಪಡಿಸುವಂಥಾದ್ದೇನೂ ಇಲ್ಲವೆಂದು ಹೇಳುತಿದ್ದಳು. 'ಅದು ಹೇಗಿದ್ದರೂ'— ಮುಂದಿನ ವರ್ಷಗಳಲ್ಲಿ ಕವೀಂದ್ರರೇ ಬರೆದರು—'ಆಕೆ ನನ್ನನ್ನು ಗರ್ವಪಡದಂತೆ ನೋಡಿಕೊಂಡಳು.'

ಕೊನೆಯದಾದರೂ ಅತ್ಯಂತ ಮಹತ್ವವಾದ ದಿನವೆಂದರೆ–ಗಂಗಾನದಿಯ ಸಮೀಪದಲ್ಲಿದ್ದ 'ಉದ್ಯಾನಗೃಹ'ಕ್ಕೆ ಮಕ್ಕಳನ್ನು ಕರೆದೊಯ್ದುದು. ದೋಣಿಗಳಿಂದಲೂ ಅಂದವಾದ ಮರಗಳನ್ನುಳ್ಳ ದಂಡೆಗಳಿಂದಲೂ ಶೋಭಿಸುತಿದ್ದ ಪ್ರಸಿದ್ಧ ಗಂಗಾವಾಹಿನಿಯ ಸೊಬಗನ್ನು ಅವರು ಕಂಡುದು ಅದೇ ಮೊದಲು. ಆಗಿನ ದಿನಗಳಲ್ಲಿ ಕೊನೆಯಿಲ್ಲದ ಹೊಗೆಯನ್ನು ಕಾರುತಿದ್ದ ಕಾರ್ಖಾನೆಗಳಿದ್ದಿಲ್ಲ. ತಿಳಿಯಾದ ಪ್ರವಾಹವೂ ಹಚ್ಚನೆಯ ಮರಗಳೂ ತಮ್ಮ ಸೌಂದರ್ಯವನ್ನು ಬೀರಿ ರವೀಂದ್ರನನ್ನು ಮುಗ್ಧಗೊಳಿಸಿದುವು. ಅವನು ಗೂಡಿನಿಂದ ಬಿಟ್ಟ ಹಕ್ಕಿಯಂತಾದನು. ಇತರ ಮಕ್ಕಳೊಂದಿಗೆ ನೆರೆಯ ಹಳ್ಳಿಗೆ ಹೋಗಲು ಸಂತೋಷದಿಂದ ಸಿದ್ಧನಾದನು. ಆದರೆ ಅಯ್ಯೋ! ದಾರಿಯಲ್ಲಿ ಅಣ್ಣಂದಿರು ಎದುರಾಗಬೇಕೇ! ಉದ್ಯಾನಕ್ಕೆ ಹಿಂದಿರುಗಿಸಿ ಬಿಟ್ಟರು. ಮಕ್ಕಳು ಜೋಲು ಮೋರೆ ಮಾಡಿಕೊಂಡು ಮರಳಿದರು. ತಾವು ಇನ್ನೂ ಸ್ವತಂತ್ರರಲ್ಲ ಎಂಬುದನ್ನು ಅರಿತುಕೊಂಡರು. 'ನಾವು ಗೂಡಿನಿಂದ ಹೊರಗೇನೋ ಬಂದಿದ್ದೆವು'; ರವೀಂದ್ರರು ಬರೆಯುತ್ತಾರೆ, 'ಆದರೆ ಇನ್ನೂ ಸಂಕೋಲೆಯಿಂದ ಬಂಧಿತರಾಗಿದ್ದೆವು.'

## ಅಧ್ಯಾಯ ೩.

# ಕವಿಯ ತರಬೇತಿ

ರವೀಂದ್ರನಾಥನಿಗೆ ಹನ್ನೆರಡು ವರ್ಷವಾದಾಗ ಸೋಮೇಂದ್ರ, ಸತ್ಯ ಮತ್ತು ರವೀಂದ್ರರಿಗೆ ಬ್ರಹ್ಮೋಪದೇಶವಾಯಿತು. ಮಹರ್ಷಿ ದೇವೇಂದ್ರ ನಾಥನೇ ಮಕ್ಕಳಿಗೆ ಯಜ್ಞೋಪವೀತಧಾರಣೆ ಮಾಡಿಸಿದನು. ಹಿಂದೂ ಧಾರ್ಮಿಕ ಜೀವನದಲ್ಲಿ ಪವಿತ್ರ ಯಜ್ಞೋಪವೀತಧಾರಣೆಯು ಅತಿ ಮುಖ್ಯ ಘಟನೆ. ಇದರ ಪೂರ್ವಾಂಗವಾಗಿ ಮೂವರು ಮಕ್ಕಳು ಮೂರು ದಿನಗಳ ವಿಶ್ರಾಂತಿ ಪಡೆಯಬೇಕಾಗಿತ್ತು. ಆದರೆ ಕಠಿಣ ನಿಷ್ಠೆಯಿಂದಿರಬೇಕಾಗಿದ್ದ ಈ ದಿನಗಳಲ್ಲಿ ಅನ್ಯೋನ್ಯ ಚೇಷ್ಟೆಮಾಡುತ್ತಲೂ ಸೇವಕರನ್ನು ವಂಚಿಸುತ್ತಲೂ ಇದ್ದರು. ಈ ಕಾಲದಲ್ಲಿ ಅವರಿಗೆ ವಿಶಿಷ್ಟರೀತಿಯಿಂದ ತಯಾರಿಸಿದ ತಿಂಡಿಗಳನ್ನು ಕೊಡುತಿದ್ದರು. ರವೀಂದ್ರನಾಥನು ಮುಂದೆ ಆ ಭಕ್ಷ್ಯಗಳ ಮಧುರ ಸ್ಮರಣೆಯನ್ನು ಮಾಡುತಿದ್ದನು. ಅವರ ನಿತ್ಯದ ಆಹಾರಕ್ಕೂ ಅದಕ್ಕೂ ಅಜಗಜಾಂತರವಿತ್ತು! ಆದರೂ ರವೀಂದ್ರನಾಥನಿಗೆ ಒಳ್ಳೆಯ ತಿಂಡಿ ಮತ್ತು ಚೇಷ್ಟೆಗಳಿಗಿಂತಲೂ ಈ ಸಮಾರಂಭವು ಅತಿ ಮಹತ್ವದಾಗಿತ್ತು. ಗಾಯತ್ರೀ ಮಂತ್ರವು ಆತನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿತ್ತು. ಆ ಮಂತ್ರವನ್ನು ಭಕ್ತಿಯಿಂದ ಪುನಃ ಪುನಃ ಉಚ್ಚರಿಸುತಿದ್ದನಲ್ಲದೆ ಅದರ ಗೂಢಾರ್ಥವನ್ನೂ ತಿಳಿಯಲು ಪ್ರಯತ್ನಿಸುತಿದ್ದನು.

ಉಪನಯನ ಸಂಸ್ಕಾರಾನಂತರ ಮಹರ್ಷಿ ಮಗನನ್ನು ಕುರಿತು 'ನನ್ನೊಡನೆ ಬೋಲ್ಪುರ ಮತ್ತು ಹಿಮಾಲಯಗಳನ್ನು ಸಂದರ್ಶಿಸಲು ಬರುವೆಯಾ?' ಎಂದನು. ಅವನೇನೆನ್ನುವನು? ಮಾತನ್ನು ಕೇಳಿದೊಡನೆ ಆನಂದೋತ್ಸಾಹಿತನಾದ ಆತನ ನೇತ್ರಗಳು ಎಷ್ಟೊಂದು ತೇಜಃಪುಂಜವಾದುವು! ಕೆಲವೇ ದಿನಗಳಲ್ಲಿ ತಂದೆಮಕ್ಕಳಿಬ್ಬರೂ ಗಾಡಿಯಲ್ಲಿ ಕುಳಿತು ರೈಲುನಿಲ್ದಾಣಕ್ಕೆ ಬಂದರು. ಹಿಂದೆಂದೂ ರವೀಂದ್ರನು ರೈಲು ಪ್ರಯಾಣ ಮಾಡಿರಲಿಲ್ಲ.

ರವೀಂದ್ರನಾಥನು ಇನ್ನೂ ಚಿಕ್ಕವನಾಗಿದ್ದಾಗ ದೇವೇಂದ್ರನಾಥನು ಬೋಲ್ಪುರ ಹಳ್ಳಿಯಿಂದ ಎರಡು ಮೈಲುಗಳ ದೂರದಲ್ಲಿ ತುಸು ನೆಲವನ್ನು ಕೊಂಡುಕೊಂಡಿದ್ದನು. ಅಲ್ಲೊಂದು ಮನೆಯನ್ನು ಕಟ್ಟಿಸಿ ಇಷ್ಟಬಂದಾಗಲೆಲ್ಲ ಪ್ರಶಾಂತವಾದ ಆ ಸ್ಥಳಕ್ಕೆ ಬಂದು ಶಾಂತಚಿತ್ತನಾಗಿ ಪರಮಾತ್ಮನ ಧ್ಯಾನದಲ್ಲಿ ಲೀನನಾಗುತಿದ್ದನು. ಈ ಆಶ್ರಮವೇ 'ಶಾಂತಿನಿಕೇತನ.' ಸತ್ಯನು ಈ ಮೊದಲೇ

ಶಾಂತಿನಿಕೇತನವನ್ನು ಸಂದರ್ಶಿಸಿದ್ದನು. ಅವನು ರೈಲು ಪ್ರಯಾಣದ ಭಯಂಕರ ಅನಾಹುತಗಳನ್ನೂ ಶಾಂತಿನಿಕೇತನದ ಆಶ್ಚರ್ಯಾದ್ಭುತಗಳನ್ನೂ ಕುರಿತಾದ ಕಟ್ಟುಕಥೆಗಳನ್ನು ರವಿಗೆ ಹೇಳಿದ್ದನು. ಸತ್ಯನ ಕತೆಗಳನ್ನೇ ನೆನೆಯುತ್ತಾ ರವಿ ನಿಲ್ದಾಣಕ್ಕೆ ತಲಪಿದನು; ಉದ್ವೇಗಗೊಂಡಿದ್ದ ಅವನು, ರೈಲುಬಂಡಿಯು ಸುರಕ್ಷಿತ ವಾಗಿಯೂ ಸರಾಗವಾಗಿಯೂ ಸಾಗುತಿದ್ದುದನ್ನು ಕಂಡು ನಿರಾಶೆಗೊಂಡನು! ಆದರೆ ಶಾಂತಿನಿಕೇತನವು ನಿರಾಶೆಗೊಳಿಸಲಿಲ್ಲ. ಇಲ್ಲಿ ಯಥೇಷ್ಟ ಸಂಚರಿಸುತ್ತ ಲೂ ಸಂಶೋಧನೆ ನಡೆಸುತ್ತಲೂ ಇದ್ದನು. ಇಲ್ಲಂತೂ ಗೂಡಾಗಲೀ ಸಂಕೋಲೆ ಯಾಗಲೀ ಇದ್ದಿಲ್ಲ. ಹಕ್ಕಿ ಸ್ವತಂತ್ರವಾಗಿತ್ತು! ಚತುರನಾದ ದೇವೇಂದ್ರ ನಾಥನು ಮಗನು ಮಾಡುತಿದ್ದ ಪ್ರತಿಯೊಂದು ಕಾರ್ಯದಲ್ಲಿಯೂ ಆಸಕ್ತಿಯನ್ನು ತೋರಿಸುತ್ತಲೂ, ಅವನ ಸುಖಸಲ್ಲಾಪಗಳನ್ನು ಕೇಳುತ್ತಲೂ, ಅವನಿಂದ ಕೆಲವೊಂದು ಕೆಲಸಗಳನ್ನು ಮಾಡಿಸುತ್ತಲೂ ಇದ್ದನು. ತಂದೆ ಹೇಳಿದ ಕೆಲಸ ಗಳನ್ನು ಮಗನು ಉತ್ಸಾಹದಿಂದ ನೆರವೇರಿಸುತಿದ್ದನು.

ರವೀಂದ್ರನಾಥನಿಗೆ ತನ್ನ ತಂದೆಯಲ್ಲಿ ವಿಶೇಷವಾದ ಭಕ್ತಿಗೌರವಗಳಿದ್ದುವು. ಅವನ ಬಾಲ್ಯದಲ್ಲಿ ಮಹರ್ಷಿ ಹೆಚ್ಚಾಗಿ ಮನೆಯಲ್ಲಿರುತ್ತಿರಲಿಲ್ಲ. ಆಗಾಗ ಬಂದು ಕೆಲವು ದಿನವಿದ್ದು ಮರಳುತಿದ್ದನು. ತನ್ನ ತಂದೆಯು ಹೇಗೆ ಪ್ರಾತಃಕಾಲ ದಲ್ಲಿ ಬಿಳಿ ಉಡುಪನ್ನು ಧರಿಸಿ ಸ್ತಬ್ಧನಾಗಿ, ಶಾಂತಚಿತ್ತನಾಗಿ, ಧ್ಯಾನಾಸಕ್ತನಾಗಿ ಕುಳಿತುಕೊಳ್ಳುತಿದ್ದನೆಂಬುದೇ ಹುಡುಗನ ಬಾಲ್ಯಸ್ಮರಣೆಗಳಲ್ಲಿ ಮೊದಲನೆಯದು. ವಿಶಾಲವಾದ ಮೈದಾನನ್ನೇ ಸಿಟ್ಟಿಸುತ್ತ ಒತ್ತಿನಲ್ಲಿ ಬೆಳೆದ ಮರಗಳೆರಡು ಶಾಂತಿ ನಿಕೇತನವನ್ನು ಅಲಂಕರಿಸಿದ್ದುವು. ಈ ಮರಗಳ ಅಡಿಯಲ್ಲಿ ಕುಳಿತು ದಿನಂಪ್ರತಿ ಮಹರ್ಷಿ ಮುಂಜಾನೆಯ ಧ್ಯಾನದಲ್ಲಿ ತತ್ಪರನಾಗುತಿದ್ದನು. ಹಲವು ವರ್ಷಾ ನಂತರ, ಪುರಾತನ ವೃಕ್ಷಗಳೆರಡು ಇಂದಿಗೂ ಜೀವಂತವಾಗಿ ನಿಂತಿರುವ ಅದೇ ಸ್ಥಳದಲ್ಲಿ ರವೀಂದ್ರನಾಥನು ಸ್ಮಾರಕಶಿಲೆಯೊಂದನ್ನು ಕಟ್ಟಿಸಿದನು. ಅದರಲ್ಲಿ ಮಹರ್ಷಿ ತಾನು ದೇವರನ್ನು ಅರ್ಥಮಾಡಿಕೊಂಡಂತೆ ಆಡುತಿದ್ದ ಸೊಗಸಾದ ಮಾತುಗಳನ್ನು ಕೆತ್ತಿಸಿದನು:

ಅವನೇ
ನನ್ನ ಜೀವನಾಧಾರ,
ನನ್ನ ಮನೋಲ್ಲಾಸ,
ನನ್ನ ಆತ್ಮಶಾಂತಿ.

ತಂದೆಯ ಜೀವನಾದರ್ಶಗಳು ರವೀಂದ್ರನ ಮೇಲೆ ವಿಶೇಷ ಪರಿಣಾಮಕಾರಿ

ಯಾದುವು. 1873ರ ಬೇಸಿಗೆಯಲ್ಲಿ ಆತನೊಂದಿಗೆ ಕಳೆದ ತಿಂಗಳುಗಳು ರವೀಂದ್ರನ ಜೀವನದ ಮಹತ್ವಗಳಲ್ಲೊಂದು.

ಶಾಂತಿನಿಕೇತನದಿಂದ ತಂದೆಮಕ್ಕಳಿಬ್ಬರೂ ಅಮೃತಸರಕ್ಕೆ ಹೋದರು. ಅಲ್ಲಿ ಪ್ರಸಿದ್ಧವಾದ ಸಿಕ್ಖರ ದೇವಾಲಯವೊಂದಿದೆ. ದೇವೇಂದ್ರನಾಥನು ಮಗನೊಂದಿಗೆ ದೇವಾರಾಧನೆಗೆ ಬಂದನು. ಬಂಗಾಳದಿಂದ ಬಂದ ಆಗಂತುಕನೊಬ್ಬನು ತಮ್ಮ ದೇವರ ಸ್ತೋತ್ರಗಳಲ್ಲಿ ಕೆಲವನ್ನಾದರೂ ತಿಳಿಯಲೂ ಪ್ರಾರ್ಥನೆಯಲ್ಲಿ ಭಾಗವಹಿಸಲೂ ಆಸಕ್ತನಾಗಿದ್ದುದನ್ನು ಕಂಡು ಸಿಕ್ಖರು ಅತ್ಯಂತ ಸಂತೋಷಾಶ್ಚರ್ಯಗಳನ್ನು ವ್ಯಕ್ತಪಡಿಸಿದರು. ಅಲ್ಪಾವಕಾಶದಲ್ಲೇ ಹಲವರು ದೇವೇಂದ್ರನಾಥನ ಸ್ನೇಹಿತರಾದರು. ರವೀಂದ್ರನು ತನ್ನದಲ್ಲದುಳಿದ ಮತಧರ್ಮಗಳ ಆದರ್ಶತತ್ವಗಳನ್ನು ಗೌರವಿಸಲು ತಂದೆಯಿಂದಲೇ ಕಲಿತನು; ವಿವಿಧ ಪಂಥಾವಲಂಬಿಗಳು ದೇವಾರಾಧನೆಯಲ್ಲಿ ಹೇಗೆ ಒಂದಾಗಬಲ್ಲರು ಮತ್ತು ತಂತಮ್ಮ ಧರ್ಮದ ಶುಭಸತ್ಯಗಳನ್ನು ಅನ್ಯೋನ್ಯ ಹಂಚಿಕೊಳ್ಳಬಲ್ಲರು ಎಂಬುದನ್ನು ಸ್ವತಃ ಕಂಡುಕೊಂಡನು.

ಇದಾದ ಮೇಲೆ ಅವರು ಹಿಮಾಲಯದಲ್ಲಿನ ಡಾಲ್‌ಹೌಸಿಯಲ್ಲಿ ನಾಲ್ಕು ತಿಂಗಳ ಕಾಲ ನೆಲಸಿದರು. ಇಲ್ಲಿನ ಕಡಿದಾದ ಇಳುಕಲು ಪ್ರದೇಶಗಳು ದೇವದಾರುದ್ರುಮಗಳಿಂದಾವೃತವಾಗಿದ್ದುವು. ಇವುಗಳ ಮಧ್ಯದಲ್ಲಿ ರವೀಂದ್ರನು ಸ್ವೇಚ್ಛೆಯಿಂದ ಸುತ್ತಾಡುತಿದ್ದನು. ಪ್ರತಿನಿತ್ಯ ಬೆಳಗ್ಗೆ ತಂದೆ ಮಕ್ಕಳಿಬ್ಬರೂ ಒಟ್ಟಾಗಿ ತಿರುಗಾಡುವುದಕ್ಕೆ ಹೋಗುತಿದ್ದರು. ಆದರೆ ಹುಡುಗನಿಗೆ ಹೆಚ್ಚು ಹೊತ್ತು ತಂದೆಯೊಂದಿಗೆ ದೂರ ನಡೆಯುವಷ್ಟು ಶಕ್ತಿ ಇದ್ದಿಲ್ಲ. ಸ್ವಲ್ಪ ದೂರ ನಡೆದ ಮೇಲೆ ತಂದೆಯನ್ನು ಬಿಟ್ಟು ತಾನೊಬ್ಬನೇ ತನ್ನದೇ ದಾರಿ ಹಿಡಿದು ಮನೆಗೆ ಮರಳುತಿದ್ದನು. ದೇವೇಂದ್ರನಾಥನು ತಾನು ನಂಬಿದ್ದ ಸರಳ ಸಾಹಸಮಯ ಜೀವನದ ತರಬೇತಿಯನ್ನು ಮಗನಿಗೆ ಕೊಡುತಿದ್ದನು. ಡಾಲ್‌ಹೌಸಿಯ ಹವೆಯಲ್ಲೂ ಹಿಮಶೀತಲವಾದ ನೀರಿನಲ್ಲಿ, ಮನೆಯಲ್ಲಿ ಮಿಂಯುತಿದ್ದಂತೆ ಮಿಂಯಲು ರವೀಂದ್ರನನ್ನು ಒತ್ತಾಯಪಡಿಸಿದನು. ಅವನು ಈ ಪಾಠವನ್ನು ಚೆನ್ನಾಗಿ ಕಲಿತುಕೊಂಡನು; ಮುಂದೆ ಇಂಗ್ಲೆಂಡಿಗೆ ಹೋದಾಗ ಅಲ್ಲಿ ಅತಿ ಕಠಿಣ ಚಳಿಯಲ್ಲಿಯೂ ದಿನಬಿಡದೆ ತಣ್ಣೀರು ಸ್ನಾನವನ್ನೇ ಮಾಡಿದನು.

ಡಾಲ್‌ಹೌಸಿಯಲ್ಲಿದ್ದಾಗ ದೇವೇಂದ್ರನಾಥನು ದಿನಾಲೂ ಮಗನಿಗೆ ಇಂಗ್ಲೀಷು ಸಂಸ್ಕೃತ ಪಾಠಗಳನ್ನು ಕಲಿಸುತಿದ್ದನು ಮತ್ತು ತಾನೇ ಓದುವಂತೆಯೂ ಪ್ರೋತ್ಸಾಹಿಸಿದನು. ರವೀಂದ್ರನಾಥನು ಕಾಳಿದಾಸನ ಮೇಘದೂತ

ಕಾವ್ಯವನ್ನು ಮೊದಲು ಓದಿದುದು ಇದೇ ಸಂದರ್ಭದಲ್ಲಿ. ಮೇಘದೂತದಲ್ಲಿ ಭಾರತದ ಹಳ್ಳಿಗಳ ಸುಂದರ ದೃಶ್ಯಗಳು, ಮಳೆಗಾಲದ ಭವ್ಯ ವರ್ಣನೆಗಳು, ಪುರಾತನ ನ್ಯಾಯಾಲಯಗಳು ಮತ್ತು ರಾಜಾಲಯಗಳು ವರ್ಣಿತವಾಗಿವೆ. ರವೀಂದ್ರನಾಥನಿಗೆ ಈ ಕಾವ್ಯದ ಸಂಪೂರ್ಣ ಅರ್ಥವಾಗಲಿ ಸೌಂದರ್ಯವಾಗಲಿ ಆಗ ತಿಳಿದಿರಲಿಲ್ಲ. ಆದರೂ ಪದಗಳ ದಿವ್ಯ ನಾದಮಾಧುರ್ಯವನ್ನು ಮೆಚ್ಚಿದ್ದನು. ಸೊಗಸಾದ ಉಪಮೆಗಳೂ ವರ್ಣನೆಗಳೂ ಅವನ ಮನದಲ್ಲಿ ತುಂಬಿ ಆತನ ಕಲ್ಪನೆಯನ್ನು ಕೆರಳಿಸಿದುವು. ಮತ್ತಿನ ವರ್ಷಗಳಲ್ಲಿ ರವೀಂದ್ರನಾಥರು ಗಾಢಾನುರಾಗಾಶ್ಚರ್ಯಾನ್ವಿತರಾಗಿ ಕಾಳಿದಾಸನ ಕೃತಿಗಳನ್ನೆಲ್ಲ ಸತತಾಭ್ಯಾಸ ಗೈದರು. ಜೊತೆಗೆ ಬೇರೆಷ್ಟೋ ಗ್ರಂಥಗಳನ್ನೂ ಓದಿದರು. ನಿಜವಾಗಿಯೂ ಡಾಲ್‌ಹೌಸಿಯಲ್ಲಿ ಕಳೆದ ತಿಂಗಳುಗಳೇ ಅವರ ಸಾಹಿತ್ಯಾಭಿರುಚಿಯನ್ನು ಪೂರ್ಣ ಜಾಗೃತಗೊಳ್ಳಿಸಿದುವೆನ್ನಬಹುದು.

ಕತ್ತಲಾದ ರಾತ್ರಿಯಲ್ಲಿ ತಂದೆಮಕ್ಕಳಿಬ್ಬರೂ ನಕ್ಷತ್ರಗಳ ಕಡೆಗೆ ನೋಡುತ್ತಾ ಕುಳಿತುಕೊಳ್ಳುತಿದ್ದರು. ದೇವೇಂದ್ರನಾಥನು ಮಗನಿಗೆ ಗ್ರಹಗಳನ್ನೂ ತಾರಾಮಂಡಲಗಳನ್ನೂ ತೋರಿಸಿ ಖಗೋಲಶಾಸ್ತ್ರದ ಲಘುಪರಿಚಯ ಮಾಡಿಕೊಟ್ಟನು. ಅವನು ಇನ್ನೂ ಪುಟ್ಟ ಮಗುವಾಗಿದ್ದಾಗಲೇ ಆಕಾಶವು ಅವನ ಲಕ್ಷ್ಯವನ್ನು ಸೆಳೆದಿತ್ತು. ಅದರ ಬೃಹದಾಕಾರವು ಅವನನ್ನು ಅಚ್ಚರಿಗೊಳಿಸಿತ್ತು. ಈಗ ಅದೇ ಗಹನಾಕಾಶದ ಕೆಲವೊಂದು ಆಶ್ಚರ್ಯಕರವಾದ ವಿಷಯಗಳನ್ನು ಕೇಳಿದನು. ಅಂದಿನಿಂದ ಖಗೋಲಶಾಸ್ತ್ರದಲ್ಲಿ ವಿಶೇಷಾಸಕ್ತಿ ವಹಿಸಿದನು. ಅವನಿಗೆ ಖಗೋಲಶಾಸ್ತ್ರವು ಬರೇ ಅಂಕೆಸಂಖ್ಯೆಗಳ ಲೆಕ್ಕಾಚಾರವಾಗಿರದೆ ಕವಿತಾಮಯವೂ ಗಹನಾನ್ವಿತವೂ ಆಗಿತ್ತು. ಅವನ ಅನೇಕ ಕವನಗಳಲ್ಲಿ ನಮ್ಮಿಂದ ದೂರವಾಗಿರುವ ಅನಂತಾಕಾಶದ ರಮಣೀಯ ಚಿತ್ರವು ತುಂಬಿಕೊಂಡಿದೆ. ತಮ್ಮ ಜೀವನದ ಕೊನೆಯ ದಿನಗಳಲ್ಲಿ ಖಗೋಲ ಗಣಿತದ ಕುರಿತು ಒಂದು ಗ್ರಂಥವನ್ನು ಬರೆದರು. ಇದು ಸರಳ ಶೈಲಿಯಲ್ಲಿದ್ದು ಪ್ರಭಾಪೂರ್ಣ ನಕ್ಷತ್ರಲೋಕದ ಸುಂದರ ಚಿತ್ರವನ್ನೂ ಅತ್ಯಾಧುನಿಕ ವಿಜ್ಞಾನ ಸಂಶೋಧನೆಗಳನ್ನೂ ಒಳಗೊಂಡಿದೆ. ದೇವೇಂದ್ರನಾಥನು ಮಗನನ್ನು ಸಸ್ಯಶಾಸ್ತ್ರದ ಮೇಲೂ ಅಭಿರುಚಿಗೊಳ್ಳುವಂತೆ ಪ್ರೋತ್ಸಾಹವಿತ್ತನು. ತತ್ಫಲವಾಗಿ ರವೀಂದ್ರನಾಥರು ಆಜೀವಪರ್ಯಂತ ಹೂಗಳ ಮತ್ತು ಮರಗಳ ಜೀವನವನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತ ಅವುಗಳ ಕುರಿತಾದ ಪ್ರೇಮಪೂರ್ಣ ಕವನಗಳನ್ನು ರಚಿಸಿದರು.

'ಮಕ್ಕಳು ಸ್ವತಃ ಯೋಚಿಸಲು ಕಲಿಯಬೇಕು; ಇತರರ ಅಭಿಪ್ರಾಯಗಳನ್ನು

ವಿಚಾರಿಸದೆ ಅಂಗೀಕರಿಸಬಾರದು' ಎಂಬುದು ದೇವೇಂದ್ರನಾಥನ ಅಭಿಲಾಷೆಯಾಗಿತ್ತು. ರವೀಂದ್ರನಾಥನು ತಂದೆಯ ಈ ಅಭಿಪ್ರಾಯವನ್ನು ವಿರೋಧಿಸಿ ವಾದಿಸಿದಾಗ ಅವನು ಸಿಟ್ಟುಗೊಂಡು ಬೈಯಲಿಲ್ಲ. ಮಗನ ವಿಚಾರಸರಣಿಯನ್ನು ಸಾವಧಾನದಿಂದ ಕೇಳುತ್ತಿದ್ದು, ಕೊನೆಯಲ್ಲಿ ಅವನೆಲ್ಲಿ ತಪ್ಪಿರುವನೆಂಬುದನ್ನು ವಿಷದವಾಗಿ ವಿವರಿಸುತಿದ್ದನು. ಈ ಪ್ರಕಾರವಾಗಿ ರವಿ ತಂದೆಯ ತರ್ಕಸರಣಿಯನ್ನು ಅನುಸರಿಸುತ್ತಾ ಅವನ ಕೊನೆಯ ನಿರ್ಧಾರವನ್ನು ತಿಳಿಯುತಿದ್ದನು. ತಂದೆಯು ಹೇಳಿದುದೇ ವೇದವಾಕ್ಯವೆಂದು ಅಂಗೀಕರಿಸಬಾರದೆಂದೂ, ಅದು ನಿಜವೇ ಎಂಬುದನ್ನು ಸ್ವತಃ ಕಂಡುಕೊಂಡ ಮೇಲೆ ನಂಬಬೇಕೆಂದೂ ದೇವೇಂದ್ರನಾಥನು ಹೇಳುತಿದ್ದನು. 'ನಾವು ಮನಃಪೂರ್ವಕವಾಗಿ ಸತ್ಯವನ್ನು ಪ್ರೇಮಿಸಬೇಕು ಎಂಬುದು ಅವನ ಇಚ್ಛೆಯಾಗಿತ್ತು'—ರವೀಂದ್ರನಾಥರು ಬರೆಯುತ್ತಾರೆ. ರವೀಂದ್ರನ ಅಣ್ಣಂದಿರೆಲ್ಲರೂ ತಂದೆಯು ಮಗನನ್ನು ಕಾಣುತಿದ್ದಂತೆ ಅತಿ ಸಲಿಗೆಯಿಂದಲೇ ವರ್ತಿಸಿದುದರಿಂದ ರವಿ ನಿರ್ಭಯವಾಗಿ ತನ್ನ ಅಭಿಪ್ರಾಯಗಳನ್ನು ಹೊರಗೆಡಹುತಿದ್ದನು. ಈ ರೀತಿಯಲ್ಲಿ ಪರಿಶುದ್ಧವಾದ ಹಾಗೂ ವಿಶ್ವಾಸಪೂರ್ಣವಾದ ಜೀವನದ ರಹಸ್ಯಗಳನ್ನು ತಿಳಿಯಲು ಶಕ್ತನಾದನು.

ರವೀಂದ್ರನಾಥನು ಕಲ್ಕತ್ತೆಕ್ಕೆ ಮರಳಿದ ತರುವಾಯ ಸೈಂಟ್ ಕ್ಸೇವಿಯರ್ ಕಲಾಶಾಲೆಗೆ ಸೇರಿದನು. ಇಲ್ಲಿನ ಉಪಾಧ್ಯಾಯರನ್ನೂ ವಿದ್ಯಾರ್ಥಿಗಳನ್ನೂ ಬಹಳಷ್ಟು ಮೆಚ್ಚಿದ್ದನು. ಉಪಾಧ್ಯಾಯರ ಪೈಕಿ ಪಾದರಿ ಪೆನರಾಂಡ ಅವರನ್ನು ವಿಶೇಷವಾಗಿ ಪ್ರೀತಿಸುತಿದ್ದನು. ಅವರ ಪ್ರಶಾಂತ ಆತ್ಮತೇಜಸ್ಸು ಮುಖದಲ್ಲಿ ಪ್ರಕಾಶಿಸುತಿತ್ತು. ತಮ್ಮ ಬಾಹ್ಯ ಕಾರ್ಯಗಳಲ್ಲಿ ತತ್ಪರರಾಗಿದ್ದಾಗಲೂ ಅವರ ಅಂತರಾತ್ಮವು ಅಂತರ್ಮುಖವಾಗಿ ಪ್ರಾರ್ಥನೆಯಲ್ಲಿ ಮಗ್ನವಾಗಿದ್ದಂತೆ ತೋರುತಿತ್ತು. ರವೀಂದ್ರನಾಥನು ನಿತ್ಯದ ಸಾಮಾನ್ಯ ಪಾಠಗಳಿಂದ ತೃಪ್ತಿಪಡುವವನಲ್ಲವೆಂಬುದನ್ನು ಇನ್ನೊಬ್ಬ ಅಧ್ಯಾಪಕನು ಕಂಡುಕೊಂಡನು; ಮತ್ತು ಷೇಕ್ಸ್ಪಿಯರನ 'ಮ್ಯಾಕ್‌ಬೆತ್' ನಾಟಕವನ್ನು ಬಂಗಾಳಿಗೆ ಭಾಷಾಂತರಿಸುವಂತೆ ಮಾಡಿದನು. ಜೊತೆಗೆ ತುಂಬಾ ಸಾಹಿತ್ಯಗ್ರಂಥಗಳನ್ನು ಓದಲೂ ಹೇಳಿದನು. ರವೀಂದ್ರನಾಥನು ಇದರಲ್ಲಿ ಒಳ್ಳೆಯ ಅಭಿವೃದ್ಧಿಯನ್ನು ಹೊಂದಿದನಾದರೂ ತಾನು ಡಾಲ್‌ಹೌಸಿಯಲ್ಲಿ ಕಳೆದ ಸ್ವತಂತ್ರಜೀವನ, ಅಭ್ಯಾಸಗಳನ್ನು ನೆನೆದಾಗ ಅವನಿಗೆ ಈ ಕಲಾಶಾಲೆಯು ಮೊದಲಿನವುಗಳಿಗಿಂತಲೂ ವಿಶೇಷವಾದ ಸೆರೆಮನೆಯಂತೆ ತೋರಿತು. ಆದುದರಿಂದಲೇ ಶಾಲೆಗೆ ತಪ್ಪಿಸುವುದರಲ್ಲಿ ಜಾಣನಾದನು! ಕೊನೆಯಲ್ಲಿ ರವೀಂದ್ರನಾಥನನ್ನು ತನ್ನಿಷ್ಟಬಂದಂತೆ ಸ್ವತಂತ್ರನಾಗಿ

ಓದಲು ಸಂದರ್ಭವನ್ನು ಕಲ್ಪಿಸಿಕೊಟ್ಟರೆ ತಾನೇ ವಿದ್ಯಾರ್ಜನೆಯನ್ನು ಮಾಡಲು ಶಕ್ತನಾಗುವನು ಎಂದು ಅಣ್ಣಂದಿರು ನಿರ್ಧರಿಸಿದರು; ಮತ್ತು ಮನೆಯಲ್ಲೇ ಇರುವಂತೆ ಹೇಳಿದರು. ಅಂದಿನಿಂದ ರವೀಂದ್ರನಾಥನ ಶಾಲಾದಿನಗಳು ಕೊನೆಗೊಂಡುವು.

ರವೀಂದ್ರನಾಥನು ತನ್ನ ಹದಿಮೂರರಿಂದ ಹದಿನೇಳನೆಯ ವರ್ಷದ ವರೆಗೆ ಜೊರಸಾಂಕೋದ ವಯಸ್ಕರ ಲೋಕದಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಲೂ ವಿಶೇಷಾಸಕ್ತಿ ತೋರುತ್ತಲೂ ಬಳೆದನು. ಅವನ ಅಣ್ಣಂದಿರೆಲ್ಲರೂ ವಿಶೇಷ ಬುದ್ಧಿವಂತರೂ ಕಲಾವಂತರೂ ಆಗಿದ್ದರು. ಇಂಥವರ ನಡುವಿನಲ್ಲಿದ್ದ ರವೀಂದ್ರನು ಸುಲಭವಾಗಿ ಎಲ್ಲವನ್ನೂ ಕಲಿತುಕೊಂಡನು. ಹಿರಿಯಣ್ಣನಾದ ದ್ವಿಜೇಂದ್ರನಾಥನು ತೀಕ್ಷ್ಣ ಹಾಗೂ ಗಾಢಾಲೋಚನೆಯುಳ್ಳವನು; ವಿವಿಧ ಲೇಖನಗಳನ್ನು ಬರೆಯುವ ಹವ್ಯಾಸವುಳ್ಳವನು. ಭಿನ್ನಾಭಿರುಚಿಯುಳ್ಳ ಜನರು ಅವನ ಕೊಠಡಿಗೆ ಬರುತಿದ್ದರು. ಒಮ್ಮೆ ವೇದಾಂತದ ಕುರಿತು ಚರ್ಚೆ ನಡೆಯಿತು. ದ್ವಿಜೇಂದ್ರನಾಥನು ವೇದಾಂತ ವಿಷಯಕವಾದ ಸುದೀರ್ಘ ಲೇಖನವನ್ನೇ ಓದಿದನು. ರವೀಂದ್ರನಾಥನಿಗೆ ಇದು 'ಉಕ್ಕಿನ ಕಡಲೆಯಾಯಿತು.' ಇನ್ನೊಮ್ಮೆ ಗಣಿತಶಾಸ್ತ್ರದಲ್ಲಿ ಆಸಕ್ತಿತೋರಿದನು. ಆಗಿಂದಾಗ ಕವನಗಳನ್ನೂ ರಚಿಸಿದನು. ಅವನು ಬರೆದ ಕವನಗಳ ಹಾಳೆಹಾಳೆಗಳು ಮನೆಯಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದುವು. ಒಂದು ಕವಿತೆ ಪೂರ್ತಿಯಾದೊಡನೆ ಮನೆಯವರನ್ನೂ ಮಿತ್ರರನ್ನೂ ಕರೆದು ಓದಿ ಹೇಳುತಿದ್ದನು. ಇಂತಹ ಉತ್ಸಾಹ ಸಂದರ್ಭಗಳಲ್ಲಿ ಎಲ್ಲರೊಂದಿಗೆ ಸೇರಿ ಹೊಟ್ಟೆತುಂಬ ನಗುತಿದ್ದನು. ಅವನ ನಗು ಮನೆಯಲ್ಲೆಲ್ಲ ಪ್ರತಿಧ್ವನಿ ಗುಡುತಿತ್ತು. ಈಜುವುದರಲ್ಲಿಯೂ ಅವನು ನಿಪುಣನಾಗಿದ್ದನು. ಸಂದರ್ಭ ಸಿಕ್ಕಾಗಲೆಲ್ಲ ಗಂಗಾನದಿಯಲ್ಲಿ ಈಜುತಿದ್ದನು. ಅವನ ತಮ್ಮಂದಿರೆಲ್ಲ ಮನೆಯ ಕೊಳದಲ್ಲಿ ತಾವೇ ಈಜು ಕಲಿತರು. ಅವರಿಗೆ ಸಹಾಯವನ್ನೂ ಪ್ರೋತ್ಸಾಹ ವನ್ನೂ ನೀಡಿದನು. ರವೀಂದ್ರನಾಥನೂ ಈಜುವುದರಲ್ಲಿ ಗಟ್ಟಿಮುಟ್ಟಾದ ಆಳಾದನು.

ಈ ವರ್ಷಗಳಲ್ಲಿ ಐದನೆಯ ಅಣ್ಣ ಜ್ಯೋತಿರಿಂದ್ರನಾಥನು ರವೀಂದ್ರ ನಾಥನ ಮುಖ್ಯ ಸ್ನೇಹಿತನೂ ಒಡನಾಡಿಯೂ ಆಗಿದ್ದನು. ಕವಿಗಿಂತ ಹನ್ನೆರಡು ವರ್ಷಕ್ಕೆ ಆತನು ದೊಡ್ಡವನು. ತನಗೆ ತಪ್ಪೆಂದೂ ಮೂಢತನವೆಂದೂ ತೋರಿದ ಸಮಾಜ ಪದ್ಧತಿಗಳನ್ನು ಧೈರ್ಯದಿಂದ ಖಂಡಿಸಿ ಸಮಾಜಸುಧಾರಕನಾದನು. ತಮ್ಮ ಎಳವೆಯಲ್ಲಿ 'ಬೊಂಬೆಗಳ ಮದುವೆಯಾಟ'ವನ್ನಾಡಲು ರವೀಂದ್ರನಾಥ ನನ್ನು ಆಹ್ವಾನಿಸುತಿದ್ದವಳೇ ಇವನ ಧರ್ಮಪತ್ನಿ. ಈಕೆಯೇ ಆಗಿನ ಕಾಲದಲ್ಲಿ

ಬಂಗಾಳದಲ್ಲಿ ರೂಢವಾಗಿದ್ದ 'ಅವಕುಂಠನ' ಪದ್ಧತಿಯನ್ನು ಧೈರ್ಯದಿಂದ ಉಲ್ಲಂಘಿಸಿದ ವೀರರಮಣಿ.

ಸಮಾಜ ಸುಧಾರಣೆಯಲ್ಲಿದ್ದ ಅಣ್ಣನ ಈ ಧೈರ್ಯಸ್ವಾತಂತ್ರ್ಯಗಳನ್ನು ಕಂಡು ರವೀಂದ್ರನಾಥನು ಅಚ್ಚರಿಗೊಂಡನು. ಆದರೆ ಅವರಿಬ್ಬರ ಅತ್ಯಂತ ಮೈತ್ರಿಗೆ ಮೂಲಕಾರಣ ಇಬ್ಬರೂ ಸಂಗೀತ, ನಾಟಕಪ್ರೇಮಿಗಳಾದುದೇ. ಜ್ಯೋತಿಯ ಕೊಠಡಿಯಲ್ಲಿ ಅವನದೇ ವೀಣೆಯೊಂದಿತ್ತು. ಗಂಟೆಗಟ್ಟಲೆ ಕುಳಿತು ಹೊಸಹೊಸ ರಾಗಗಳನ್ನು ನವೀನ ರೀತಿಯಲ್ಲಿ ನುಡಿಸುತಿದ್ದನು. ರವೀಂದ್ರನು ಬಳಿಯಲ್ಲೇ ಕುಳಿತು ರಾಗಕ್ಕೊಪ್ಪುವ ಪದಗಳನ್ನು ರಚಿಸುತ್ತಿದ್ದನು. ಇದರಿಂದ ಅಭ್ಯಾಸವು ಇಬ್ಬರಿಗೂ ಸುಲಭವಾಯಿತು. ಮುಂದೆ ಕವಿಯಾಗತಕ್ಕವನಿಗೆ ಇದು ಉತ್ಕೃಷ್ಟ ಅಭ್ಯಾಸವಾಗಿತ್ತು. ಪ್ರತಿ ಸಂಜೆ ಅಣ್ಣತಮ್ಮಂದಿರಿಬ್ಬರೂ ಅತ್ತಿಗೆಯೂ ಮಾಳಿಗೆಯಲ್ಲಿ ಕುಳಿತುಕೊಳ್ಳುವರು. ಜ್ಯೋತಿಯು ವೀಣೆಯನ್ನು ಬಾರಿಸಿದಾಗ ರವೀಂದ್ರನಾಥನು ಹಾಡುತ್ತಿದ್ದನು. ಅವರೊಂದಿಗೆ ಸಂಗೀತ ಪ್ರೇಮಿಗಳಾದ ಮಿತ್ರರೂ ಆಗಾಗ ಸಂಜೆಯ ಸಮಯವನ್ನು ಕಳೆಯಲು ಅಲ್ಲಿಗೆ ಬರುತಿದ್ದರು.

ಇವರಲ್ಲಿ ಶ್ರೀಕಂಠಬಾಬುವನ್ನು ರವೀಂದ್ರನಾಥನು ಬಾಲ್ಯದಿಂದಲೂ ಪ್ರೀತಿಸುತಿದ್ದನು. ಶ್ರೀಕಂಠಬಾಬು ಬೋಳುತಲೆಯ ನಗುಮುಖದ ಕರುಣಾ ಮೂರ್ತಿ. ಅವನ ಹೃದಯದಲ್ಲಿ ಸಂಗೀತದ ಕಾರಂಜಿಯು ಚಿಮ್ಮುತಿತ್ತು. ಕೇವಲ ಆತ್ಮಾನಂದಕ್ಕಾಗಿ ಹಾಡುತ್ತಿದ್ದ ಆತನೊಂದಿಗೆ ರವೀಂದ್ರನಾಥನೂ ಸೇರಿ ಪಲ್ಲವಿ ಹಾಡುತ್ತಿದ್ದನು. ಇತರರು ಆತನನ್ನು ನೋಯಿಸಲು ಯತ್ನಿಸಿ ದರೂ ಪ್ರತಿಯಾಗಿ ಎಂದೂ ಕೆಟ್ಟ ಮಾತುಗಳನ್ನಾಡುತಿದ್ದಿಲ್ಲ. ಅವನಲ್ಲಿ ಅಸೂ ಯೆಯಿಂದ ಇನ್ನೊಬ್ಬ ಸಂಗೀತಗಾರನು ಒಮ್ಮೆ ಚೆನ್ನಾಗಿ ಕುಡಿದು ಸಿಕ್ಕಾಬಟ್ಟೆ ಬೈದು ಅವಮಾನಪಡಿಸಿದನು. ಇದನ್ನು ಕೇಳಿದ ದೇವೇಂದ್ರನಾಥನು ಆತನನ್ನು ಮನೆಯಿಂದ ಹೊರದೂಡಬೇಕೆಂದಿದ್ದನು. ಆದರೆ ಶ್ರೀಕಂಠಬಾಬು ಆತನನ್ನು ಕ್ಷಮಿಸುವಂತೆ ಕೇಳಿಕೊಂಡನು: — 'ಬೈದುದು ಅವನಲ್ಲ, ಅದು ಕೇವಲ ಮದ್ಯ!' ಅವನೆಂದನು.

ಇನ್ನೊಬ್ಬ ಸಂಗೀತಪ್ರೇಮಿ ಗೆಳೆಯನೇ ಅಕ್ಷಯಘೋಷ ಚೌಧುರಿ. ಅವನಿಗೆ ಕಂಠವಿರಲಿಲ್ಲ; ಅದು ಅವನಿಗೆ ಗೊತ್ತು; ಆದರೂ ಹಾಡುವುದನ್ನು ನಿಲ್ಲಿಸಲಿಲ್ಲ! ತಾನು ಹಾಡುತಿದ್ದಾಗ ಸಿಕ್ಕಿದುದನ್ನು ಕೈಗೆತ್ತಿಕೊಂಡು ತಾಳ ಹಾಕುತಿದ್ದನು. ರವೀಂದ್ರನಾಥನು ಸುಮಾರು ಹದಿನಾರು ವರ್ಷದವನಿದ್ದಾಗ, ಒಂದು ದಿನ ಚೇಟರ್‌ಟನ್ ಎಂಬೊಬ್ಬ ಆಂಗ್ಲೇಯ ಬಾಲಕವಿಯ ಕತೆಯನ್ನು

ಚೌಧುರಿ ಹೇಳಿದನು. ಆತನು ರವೀಂದ್ರನಂತೆ ಹದಿನಾರು ವರ್ಷದವನಿದ್ದಾಗ ಪುರಾತನ ಆಂಗ್ಲೇಯ ಕವನಗಳ ಧಾಟಿಯಲ್ಲಿ ಕೆಲವೊಂದು ಕವನಗಳನ್ನು ರಚಿಸಿದ್ದನು. ಅವುಗಳನ್ನು ಇತ್ತೀಚೆಗೆ ದೊರೆತ ನಿಜವಾದ ಹಳೆಯ ಕವನ ಗಳೆಂದೇ ಪ್ರಚುರಪಡಿಸಿದ್ದನು. ವಿದ್ವಾಂಸರೂ ದಕ್ಷರೂ ಸ್ವಲ್ಪಕಾಲ ಇದು ನಿಜವೆಂದೇ ನಂಬಿ ಮೋಸಹೋದರು. ರವೀಂದ್ರನಾಥನು ಬಂಗಾಳಿಯಲ್ಲಿಯೂ ಇದೇ ತಂತ್ರವನ್ನಾಡಿದರೆ ಅದೊಂದು ತಮಾಷೆಯಾಗಬಹುದೆಂದು ಭಾವಿಸಿದನು. ಅಂತೆಯೇ ಮಧ್ಯಕಾಲೀನ ಮೈಥಿಲಿ ವೈಷ್ಣವ ಕವಿಗಳ ಶೈಲಿಯನ್ನನುಕರಿಸಿ ಕಾವ್ಯ ಶ್ರೇಣಿಯನ್ನೇ ನಿರ್ಮಿಸಿದನು. ಇವು 'ಭಾನುಸಿಂಹ'ನೆಂಬವನಿಂದ ರಚಿತವಾದು ವೆಂದೂ, ತಾನು ಪುಸ್ತಕಾಲಯವೊಂದರಲ್ಲಿ ಹಳೆಯ ಪುಸ್ತಕಗಳನ್ನು ಶೋಧಿಸು ತಿದ್ದಾಗ ದೊರೆತುವೆಂದೂ ಹೇಳಿದನು. ಅವು ಪ್ರಕಟವಾದಾಗ ಎಷ್ಟೋ ಮಂದಿ 'ಭಾನುಸಿಂಹನು' ಶುದ್ಧ ಮೈಥಿಲಿ ಕವಿಯೆಂದೇ ನಂಬಿದರು. ಕವಿಯ ಅನು ಕರಣೆಯು ಅಷ್ಟು ಸಹಜವಾಗಿತ್ತು. ಈ ಹೊಸತಾಗಿ ಕಂಡುಹಿಡಿದ ಗ್ರಂಥ ಗಳನ್ನಾಧಾರವಾಗಿಟ್ಟುಕೊಂಡು ವಿದ್ವಾಂಸನೊಬ್ಬನು ಜರ್ಮನಿಯ ವಿಶ್ವವಿದ್ಯಾ ಲಯದಲ್ಲಿ ಪಿಹೆಚ್. ಡಿ. ಪದವಿಗೆ ಉಪನ್ಯಾಸವನ್ನು ಬರೆದನಂತೆ!

ಕಲ್ಕತ್ತದ ವಿದ್ಯಾವಂತ ಕುಟುಂಬದವರು ಸಮಕಾಲೀನ ಬಂಗಾಳಿ ಸಾಹಿತ್ಯದಲ್ಲಿ ವಿಶೇಷಾಸಕ್ತಿಯುಳ್ಳವರಾಗಿದ್ದರು. ಶ್ರೇಷ್ಠ ಕಾದಂಬರಿಕಾರ ಬಂಕಿಮ್‌ಚಂದ್ರ ಚೆಟರ್ಜಿ ಸುಪ್ರಸಿದ್ಧನಾಗಿದ್ದನು. 'ಬಂಗದರ್ಶನ'ವೆಂಬ ಪತ್ರಿಕೆಯಲ್ಲಿ ತನ್ನ ಅನೇಕ ಕತೆಗಳನ್ನು ಒಂದೊಂದಾಗಿ ಪ್ರಕಟಿಸುತಿದ್ದನು. ಠಾಗೋರ್ ಕುಟುಂಬದವರೆಲ್ಲ ಒಂದನ್ನೋದಿ ಮುಗಿಸಿದ ತರುವಾಯ ಮುಂದೆ ಬರಲಿರುವ ಕತೆಗಾಗಿ ಪತ್ರಿಕೆಯನ್ನು ಆಸಕ್ತಿಯಿಂದ ನಿರೀಕ್ಷಿಸುತಿದ್ದರು.

ರವೀಂದ್ರನಾಥನ ಪುಣ್ಯ, ಅವನು ಗಟ್ಟಿಯಾಗಿಯೂ ಸ್ಪಷ್ಟವಾಗಿಯೂ ಓದುತಿದ್ದುದರಿಂದ ಮನೆಯ ಹೆಂಗುಸರೆಲ್ಲ ತಾವೇ ಓದುವುದರ ಬದಲು ಅವನಿಂದ ಓದಿಸುತಿದ್ದರು. ತನ್ನ ಸುತ್ತಲೂ ವೃತ್ತಾಕಾರವಾಗಿ ಕುಳಿತ ಕುತೂಹಲ ಶ್ರೋತೃಗಳಿಗೆ ಅವನು ಕತೆಯನ್ನೋದಿ ಹೇಳುತಿದ್ದನು.

ಸ್ವಲ್ಪ ಸಮಯಾನಂತರ ಜ್ಯೋತಿರಿಂದ್ರನಾಥನು ಸ್ವತಃ ಬಂಗಾಳಿಸಾಹಿತ್ಯ ಪತ್ರಿಕೆಯೊಂದನ್ನು ಹೊರಡಿಸಲು ನಿಶ್ಚೈಸಿದನು. ಪತ್ರಿಕೆಯನ್ನು 'ಭಾರತಿ' ಎಂದು ಕರೆದನು. ತನ್ನ ಹಿರಿಯಣ್ಣ ದ್ವಿಜೇಂದ್ರನಾಥನನ್ನು ಸಂಪಾದಕನಾಗುವಂತೆ ಸಮಜಾಯಿಸಿದನು. ಈ ಪತ್ರಿಕೆಗೆ ರವೀಂದ್ರನಾಥನು ಬಿಡದೆ ಕವನಗಳನ್ನೂ ಕತೆಗಳನ್ನೂ ಬರೆಯುತಿದ್ದನು. ತಾನು ಬರೇ ಹದಿನಾರು ವರ್ಷದವನಾಗಿದ್ದರೂ

ಪತ್ರಿಕೆಯ ನಿರ್ವಹಣಾ ಸಮಿತಿಯ ಸದಸ್ಯರಲ್ಲೊಬ್ಬನಾಗಿದ್ದನು. 'ಭಾನುಸಿಂಹ' ಕೃತ ಕವನಗಳು ಮೊದಲು ಪ್ರಕಟವಾದುದು ಭಾರತಿಯಲ್ಲೇ!

ಕತೆ ಕವನಗಳನ್ನಲ್ಲದೆ ರವೀಂದ್ರನಾಥನು ಬೇರೆ ಅನೇಕ ವಿಷಯಗಳ ಕುರಿತು ಲೇಖನಗಳನ್ನು ಬರೆದನು. ಉದಾಹರಣೆಗಾಗಿ— ಐರೋಪ್ಯರ ಸಾಹಿತ್ಯದ ಕುರಿತೂ ಇಟಲಿಯ ಮಹಾಕವಿಗಳಲ್ಲಿ ಕೆಲವರ ಕುರಿತೂ ವಿಮರ್ಶಾತ್ಮಕ ಲೇಖನಗಳನ್ನು ಬರೆದಿರುವನು. ಇವೆಲ್ಲವುಗಳಿಂದ ರವೀಂದ್ರನಾಥನನ್ನು ಅವನ ಅಭಿರುಚಿಯಂತೆ ಅವನಷ್ಟಕ್ಕೇ ಕಲಿಯಲು ಮನೆಯಲ್ಲೇ ಬಿಟ್ಟುದರ ಸತ್ಪರಿಣಾಮ ವೆಂಬುದು ಸ್ಪಷ್ಟವಾಗುವುದಿಲ್ಲವೇ? ಅವನ ಓದು ವಿಶಾಲವಾಗುತಿತ್ತು; ಪ್ರಪಂಚ ಜ್ಞಾನವೂ ವೇಗವಾಗಿ ವೃದ್ಧಿಯಾಗುತಿತ್ತು.

ಜ್ಯೋತಿರಿಂದ್ರನು ನಾಟಕಗಳನ್ನು ಬರೆಯುತಿದ್ದನಲ್ಲದೆ ಜೊರಸಾಂಕೋ ಮನೆಯ ಅಂಗಳದಲ್ಲಿ ಅವುಗಳನ್ನು ಪ್ರದರ್ಶಿಸುತಿದ್ದನು. ಸುಮಾರು ತನ್ನ ಹದಿನಾರನೆಯ ವಯಸ್ಸಿನಲ್ಲಿ ರವೀಂದ್ರನಾಥನು ಮೊತ್ತಮೊದಲು ಈ ನಾಟಕ ಗಳಲ್ಲಿ ಪಾತ್ರವಹಿಸಿದ್ದನು. ಅವನು ಉತ್ತಮ ನಟನಾಗಿದ್ದನು. ಹಾಸ್ಯ ಹಾಗೂ ಗಂಭೀರ ಪಾತ್ರಗಳನ್ನು ಅಭಿನಯಿಸಿದ್ದನು. ತನ್ನ ಜೀವಮಾನವೆಲ್ಲ ಅಭಿನಯವನ್ನು ಬಹಳ ಮೆಚ್ಚುತಿದ್ದನು. ತನ್ನದೇ ನಾಟಕಗಳಲ್ಲಿ ನಾಯಕರ ಪಾತ್ರಗಳನ್ನು ತಾನೇ ವಹಿಸುತಿದ್ದನು. ತಾನು ನಟನಾಗಿದ್ದುದಲ್ಲದೆ ಶಾಂತಿನಿ ಕೇತನದ ವಿದ್ಯಾರ್ಥಿಗಳಿಗೆ ನಟನಾಚಾರ್ಯನೂ ಆಗಿದ್ದನು. ಜ್ಯೋತಿರಿಂದ್ರ ನಾಥನೇ ಈ ಭಾಗದ ಕಾರ್ಯದಲ್ಲಿ ರವೀಂದ್ರನ ಗುರುವಾಗಿದ್ದನು.

ಇದಕ್ಕಿಂತ ಮೊದಲೇ ಅಂದರೆ, ರವಿಂದ್ರನಾಥನು ಹದಿನಾಲ್ಕು ವಯಸ್ಸಿ ನವನಿದ್ದಾಗ ಮೊದಲಬಾರಿಗೆ ಮಹಾದುಃಖವನ್ನನುಭವಿಸಿದನು. ಅವನ ತಾಯಿ ಕೆಲವು ಸಮಯದಿಂದ ನರಳುತಿದ್ದವಳು ಥಕ್ಕನೆ ತೀರಿಕೊಂಡಳು. ಅವಳ ಮರಣ ದಿಂದ ಅವನು ಭಯಗೊಳ್ಳಲಿಲ್ಲ; ಅವಳ ಮೃತಮುಖದಲ್ಲಿ ಸುಖಶಾಂತಿಗಳು ತುಂಬಿದ್ದಂತೆ ತೋರಿತು; ಆದರೆ ಅವಳ ಮೃತಶರೀರವನ್ನು ಮಹಾದ್ವಾರದ ಹೊರಕ್ಕೆ ಹೊತ್ತುಕೊಂಡು ಹೋದಾಗ ತಾನು ಒಂಟಿಯಾಗಿದ್ದಂತೆ ಅನುಭವ ವಾಯಿತು. ಅವನಿಗೆ ಗೊತ್ತಿತ್ತು, ಆಕೆ ಎಂದೆಂದೂ ಹಿಂದಿರುಗುವವಳಲ್ಲವೆಂದು. ಪುಣ್ಯವಶಾತ್ ಅವನನ್ನು ಪ್ರೀತ್ಯಾದರಗಳಿಂದ ಕಾಣುವ ಬೇರೆ ವ್ಯಕ್ತಿಗಳು ಮನೆಯಲ್ಲಿದ್ದರು— ಇವರಲ್ಲಿ ಅವನ ಅಕ್ಕ ಸ್ವರ್ಣಕುಮಾರಿ ಮತ್ತು ಕಿರಿಯ ಅತ್ತಿಗೆ— ಮುಖ್ಯರು. ಸ್ವರ್ಣಕುಮಾರಿ ಸುಪ್ರಸಿದ್ಧ ಲೇಖಿಕೆಯಾಗಿದ್ದಳು; ಸದಾ ಅವನ ಸ್ನೇಹವನ್ನು ಬಯಸುತ್ತಾ ಪ್ರೋತ್ಸಾಹಿಸುತಿದ್ದಳು. ಪ್ರತಿಯಾಗಿ ಅವನೂ ತನ್ನ ಪ್ರೀತ್ಯಾದರಗಳನ್ನು ಸಲ್ಲಿಸುತಿದ್ದನು.

## ಅಧ್ಯಾಯ ೪.

## 'ಕಾರಂಜಿಯ ಉಗಮ'

ರವೀಂದ್ರನಾಥನಿಗೆ ಹದಿನೇಳು ತುಂಬಿದಾಗ ಆತನನ್ನು ಇಂಗ್ಲೆಂಡಿಗೆ ಕಳುಹಿಸಬೇಕೆಂದು ನಿಶ್ಚೈಸಿದರು. ಅವನ ಎರಡನೆಯ ಅಣ್ಣ ಸತ್ಯೇಂದ್ರನಾಥನು ಭಾರತದ ಪ್ರಜಾ ನೌಕರಿಗೆ (Indian Civil Service) ಸೇರಿದ್ದನು; ಈ ಹುದ್ದೆಯನ್ನು ಪಡೆದ ಭಾರತೀಯರಲ್ಲಿ ಈತನೇ ಮೊದಲಿಗನು. ಸತ್ಯೇಂದ್ರನಾಥನು ಆಗ ಅಹಮ್ಮದಾಬಾದಿನಲ್ಲಿದ್ದನು. ಅವನ ಹೆಂಡತಿಮಕ್ಕಳು ಇಂಗ್ಲೆಂಡಿನಲ್ಲಿದ್ದರು. ತಾನು ರಜೆ ತೆಗೆದುಕೊಂಡು ಹೋಗಿ ಅವರನ್ನು ಸೇರಬೇಕೆಂದು ಯೋಚಿಸುತಿದ್ದನು; ಹೋಗುವಾಗ ರವೀಂದ್ರನಾಥನನ್ನು ಜೊತೆಯಲ್ಲಿ ಕರೆದೊಯ್ಯಬೇಕೆಂದು ನಿರ್ಧರಿಸಿದನು. ರವೀಂದ್ರನಾಥನು ಇಂಗ್ಲೆಂಡಿಗೆ ಹೋಗುವ ಮೊದಲು ಅಲ್ಲಿನ ಜನರ ಶಿಷ್ಟಸಂಪ್ರದಾಯಗಳನ್ನು ಸ್ವಲ್ಪಮಟ್ಟಿಗಾದರೂ ಕಲಿಯುವುದಕ್ಕಾಗಿ ಅಹಮ್ಮದಾಬಾದಿನಲ್ಲಿ ಅಣ್ಣನ ಸಂಗಡ ಬಂದು ನಿಂತನು. ಅಹಮ್ಮದಾಬಾದು ಪುರಾತನ ನಗರ; ಅಲ್ಲಿನ ಪುರಾತನ ಕಟ್ಟಡಗಳು ತರುಣ ಕವಿಯ ಕಲ್ಪನಾ ಶಕ್ತಿಗೆ ಸಿಲುಕಿದುವು. ಕಲ್ಕತ್ತವು ಶುದ್ಧ ಆಧುನಿಕ ನಗರ; ವ್ಯಾಪಾರಕ್ಕಾಗಿ ತಲೆಯೆತ್ತಿದುದು. ಗತಕಾಲದ ವೈಭವ ಸೂಚಕವಾದುದೇನೂ ಅಲ್ಲಿಲ್ಲ. ಆತನಿಗೆ ಅಹಮ್ಮದಾಬಾದು ಭಾರತದ ಭವ್ಯ ಚರಿತ್ರೆಯ ಪ್ರತ್ಯಕ್ಷ ನಿದರ್ಶನವಾಯಿತು. ತನ್ನ ಅಣ್ಣನ ಕಚೇರಿಯ ಮನೆಯು ಒಂದು ಕಾಲದಲ್ಲಿ ಅರಮನೆಯಾಗಿತ್ತು; ಅದರ ಆಡಂಬರದ ಹಜಾರಗಳು, ಆಸ್ಥಾನಗಳು ಅವನನ್ನು ಹುರಿಗೊಳಿಸಿದುವು. ಆಶ್ಚರ್ಯಕರವಾದ ಮಂದಿರದಲ್ಲಿ ಮತ್ತು ತೋಟದಲ್ಲಿ ಸುತ್ತಾಡುತಿದ್ದಂತೆ ಹಿಂದಿನಕಾಲದ ಶೋಭಾಯಮಾನ ವೈಭವ, ರಹಸ್ಯ ತಂತ್ರ ಮತ್ತು ಮೊಗಲರ ಆಸ್ಥಾನದ ಅಜ್ಞಾತ ದುಃಖಗಳ ಚಿತ್ರವನ್ನು ತನ್ನಲ್ಲೇ ಚಿತ್ರಿಸಿಕೊಳ್ಳುತಿದ್ದನು. ಆ ರೋಮಾಂಚಕಾರಕ ಅನುಭವಗಳನ್ನು ಅವನು ಎಂದೆಂದೂ ಮರೆಯಲಿಲ್ಲ. ಹಲವು ವರ್ಷಗಳು ಕಳೆದ ಮೇಲೆ 'ಹಸಿದ ಕಲ್ಲುಗಳು' ಎಂಬ ಪ್ರಸಿದ್ಧ ಕತೆಯೊಂದನ್ನು ಬರೆದನು. ಇದರಲ್ಲಿ ಪುರಾತನ ರಾಜಗೃಹದಲ್ಲಿ ನೆಲಸಿದ ಯುವಕ ನೌಕರನೊಬ್ಬನ ಅನುಭವಗಳೂ ಸಾಹಸಗಳೂ ವರ್ಣಿತವಾಗಿವೆ. ತಾನು ಅಹಮ್ಮದಾಬಾದಿನಲ್ಲಿದ್ದಾಗಲೇ ಈ ಕತೆಯನ್ನು ಬರೆಯಬೇಕೆಂದು ಯೋಚಿಸಿದ್ದನು. ಅನಂತರ ಮಹಾತ್ಮಾಗಾಂಧಿಯವರು ದಕ್ಷಿಣ ಆಫ್ರಿಕದಿಂದ ಭಾರತಕ್ಕೆ ಮರಳಿ ಬಂದವರು ರವೀಂದ್ರನಾಥನು ನೆಲಸಿದ್ದ ಸ್ಥಳದ ಸಮೀಪದಲ್ಲಿ

ಪ್ರಸಿದ್ಧವಾದ ಸಬರ್ಮತಿ ಆಶ್ರಮವನ್ನು ಕಟ್ಟಿದರು. ಒಮ್ಮೆ ಕವೀಂದ್ರರು ಮಹಾತ್ಮರೊಂದಿಗೆ ಸ್ವಲ್ಪ ಸಮಯವನ್ನಿಲ್ಲಿ ಕಳೆದಿದ್ದರು. ಇದರಿಂದ ತನ್ನ ಕತೆಯ ದೃಶ್ಯವನ್ನು ಮತ್ತೊಮ್ಮೆ ಸಂದರ್ಶಿಸಲು ಸಾಧ್ಯವಾಯಿತು.

ಅಹಮ್ಮದಾಬಾದಿನಿಂದ ಬೊಂಬಾಯಿಗೂ, ಅಲ್ಲಿ ಕೆಲವು ದಿನವಿದ್ದು ಮತ್ತೆ 1878ರ ಸೆಪ್ಟಂಬರ ತಿಂಗಳಿನಲ್ಲಿ ಅಣ್ಣನೊಂದಿಗೆ ಇಂಗ್ಲೆಂಡಿಗೆ ಹಡಗಿನಲ್ಲಿ ಪ್ರಯಾಣ ಮಾಡಿದನು. ಅಲ್ಲಿ ಆರಂಭದಲ್ಲಿ ಅತ್ತಿಗೆ ಮಕ್ಕಳೊಂದಿಗೆ ವಾಸಿಸುತ್ತಾ ಇಂಗ್ಲೀಷು ಶಾಲೆಗೆ ಹೋದನು. ಅಲ್ಲಿನ ವಿದ್ಯಾರ್ಥಿಗಳು ತಮ್ಮ ತರಗತಿಯವನಾದ ಭಾರತದ ತರುಣನಿಗೆ ತಮ್ಮ ಶುಭಾಶಯವನ್ನು ವ್ಯಕ್ತಪಡಿಸಲು ಉತ್ಸುಕರಾದರು; ಅವರು ನಾಚುತ್ತಾ ಅವನ ಹತ್ತಿರಕ್ಕೆ ಬಂದು ಕಿತ್ತಳೆ ಹಣ್ಣನ್ನಾಗಲಿ ಸಿಹಿತಿಂಡಿಗಳನ್ನಾಗಲಿ ಜೇಬಿಗೆ ತುರುಕಿಸಿ ಓಡಿಹೋಗುತಿದ್ದರು! ಇವರ ವರ್ತನೆಯು ರವೀಂದ್ರನಾಥನಿಗೆ ಸೋಜಿಗವನ್ನುಂಟುಮಾಡಿತು. ಮುಂದೆ ಹೆಚ್ಚಿನ ಇಂಗ್ಲೀಷು ಸಾಹಿತ್ಯಾಭ್ಯಾಸಕ್ಕಾಗಿ ಲಂಡನ್ ವಿಶ್ವವಿದ್ಯಾಲಯಕ್ಕೆ ಸೇರಿದನು. ಆ ಸಮಯದಲ್ಲಿ ಇಂಗ್ಲೀಷರಾದ ಸ್ಕಾಟ್ ಕುಟುಂಬದವರಲ್ಲಿ ತಂಗಿದ್ದನು. ಶ್ರೀಮತಿ ಸ್ಕಾಟ್ ರವರು ಅವನನ್ನು ತಾಯಿಯಂತೆ ನೋಡಿಕೊಂಡರು. ಅವನ ಓದಿನಲ್ಲಿ ಕುಟುಂಬದವರೆಲ್ಲ ಆಸಕ್ತಿ ವಹಿಸಿದರು. ಸಾಯಂಕಾಲದ ವೇಳೆ ಅವರೊಂದಿಗೆ ಪ್ರಸಿದ್ಧ ಸಾಹಿತಿಗಳ ಗ್ರಂಥಗಳನ್ನು ಗಟ್ಟಿಯಾಗಿ ಓದುತಿದ್ದನು. ಒಂದುವರೆ ವರ್ಷಗಳ ಕಾಲ ಇಂಗ್ಲೆಂಡಿನಲ್ಲಿದ್ದನು. ಆದರೆ ಯಾವ ಕ್ರಮವಾದ ಶಿಕ್ಷಣವನ್ನೂ ಅಭ್ಯಾಸಿಸಲಿಲ್ಲ ಮತ್ತು ಪದವಿಯನ್ನಾಗಲಿ ಯೋಗ್ಯತಾಪತ್ರಿಕೆಯನ್ನಾಗಲಿ ಪಡೆಯಲಿಲ್ಲ. ಹಲವು ಇಂಗ್ಲೀಷು ಸ್ನೇಹಿತರನ್ನು ಸಂಪಾದಿಸಿಕೊಂಡನು. ಅವರೊಂದಿಗೆ ತನ್ನ ಜೀವಮಾನವೆಲ್ಲ ಪ್ರೀತ್ಯಾದರದಿಂದ ಸಂಭಾಷಿಸುತ್ತಲೂ ಜನತೆಯೊಂದಿಗೆ ಬೆರೆಯುತ್ತಲೂ ಇಂಗ್ಲೆಂಡನ್ನು ತಿಳಿದುಕೊಂಡನಲ್ಲದೆ ಬರೇ ಪುಸ್ತಕವನ್ನೋದುವುದರಿಂದಲ್ಲ. ಇಷ್ಟಾದ ಮೇಲೆ ಭಾರತಕ್ಕೆ ಮರಳಿದನು; ಆದರೆ ಮನೆಯವರು ಅವನು ಕಾನೂನು ಅಭ್ಯಾಸ ಮಾಡಬೇಕೆಂದಿದ್ದರು. ಆದುದರಿಂದ ಒಂದು ವರ್ಷಾನಂತರ ಮರಳಿ ಲಂಡನಿನ ಯಾತ್ರೆಗೆ ಹೊರಡಲು ಅಣಿಮಾಡಿದರು. ರವೀಂದ್ರನು ತನ್ನ ಭಾವನೊಂದಿಗೆ ಮತ್ತೆ ಸಮುದ್ರ ಪ್ರಯಾಣ ಬೆಳೆಸಿದನು. ನಡು ದಾರಿಯಲ್ಲಿ ಭಾವನು ಕಾಯಿಲೆ ಬಿದ್ದುದರಿಂದ ಮದರಾಸಿನಿಂದ ಇಬ್ಬರೂ ಮನೆಗೆ ಮರಳಿದರು. ಈ ಘಟನೆ ನಡೆದ ತರುವಾಯ ಕಾನೂನು ಕಲಿಯುವುದು ಅಲ್ಲಿಗೇ ನಿಂತಿತು. ಆಗ ಸುಮಾರು ಇಪ್ಪತ್ತು ವರ್ಷದವನಾಗಿದ್ದ ರವೀಂದ್ರನಾಥನು ಪೂರ್ವಬಂಗಾಳದಲ್ಲಿದ್ದ ತನ್ನ ಕುಟುಂಬದ ಆಸ್ತಿಯನ್ನು ನೋಡಿಕೊಳ್ಳಬೇಕೆಂದು ತಂದೆ ಹೇಳಿದನು.

ಈ ಕಾರ್ಯವನ್ನು ಕೈಕೊಳ್ಳುವುದಕ್ಕಿಂತ ಮೊದಲು ರವೀಂದ್ರನಾಥನು ಕಲ್ಕತ್ತದಲ್ಲಿದ್ದುಕೊಂಡು ಸಾಹಿತ್ಯಸೇವೆಯಲ್ಲಿ ನಿರತನಾದನು. ವಿವಿಧ ಸಾಹಿತ್ಯಗಳನ್ನೆತ್ತಿಕೊಂಡು ಮಹತ್ವದ ಪ್ರಯೋಗಗಳನ್ನು ಮಾಡತೊಡಗಿದನು. 'ವಾಲ್ಮೀಕಿ ಪ್ರತಿಭೆ' ಎಂಬ ಸಂಗೀತನಾಟಕವು ಇಂತಹ ಪ್ರಯೋಗಗಳಲ್ಲಿ ಒಂದು. ವಾಲ್ಮೀಕಿಯು ರಾಮಾಯಣವನ್ನು ರಚಿಸಿದುದು ಹೇಗೆ ಎಂಬುದೇ ಇದರ ಕಥಾವಸ್ತು. ಯುವಕವಾಲ್ಮೀಕಿ ಕಾಳಿಯ ಭಕ್ತ; ದರೋಡೆಖೋರರ ಮುಖಂಡ. ಒಂದು ದಿನ ಅವನ ಅನುಯಾಯಿಗಳು ಓರ್ವ ಯುವತಿಯನ್ನು ಕಾಡಿನಲ್ಲಿ ಸೆರೆಹಿಡಿದು ಕಾಳಿಗೆ ಬಲಿಕೊಡುವುದಕ್ಕಾಗಿ ತರುತ್ತಾರೆ. ಇದನ್ನು ಕಂಡು ವಾಲ್ಮೀಕಿಯಲ್ಲಿ ಫಕ್ಕನೆ ಎಲ್ಲಿಲ್ಲದ ಕರುಣೆಯು ಆವಿರ್ಭವಿಸಿ, ಯುವತಿಯನ್ನು ಬಂಧವಿಮುಕ್ತಳನ್ನಾಗಿ ಮಾಡುತ್ತಾನೆ. ತರುವಾಯ ಚಿಂತಾಕ್ರಾಂತನಾಗಿ ಅವಿಶ್ರಾಂತನಾಗಿ ಕಾಡಿನಲ್ಲಿ ಅಲೆಯುತ್ತಾನೆ. ತನ್ನ ಚಿಂತೆಗೆ ಕಾರಣವೇನೆಂಬುದನ್ನು ತಿಳಿಯಲಾರ. ಹೀಗೆ ಬರುತ್ತಿರುವಾಗ ತನ್ನ ಗೆಳೆಯರಿಬ್ಬರು ಹಕ್ಕಿಯೊಂದನ್ನು ಕೊಂದುದನ್ನು ನೋಡುತ್ತಾನೆ. ಆಗ ಅವನ ದುಃಖ ಮರುಕಳಿಸುತ್ತದೆ; ಫಕ್ಕನೆ ಎರಡು ಸಂಸ್ಕೃತ ಶ್ಲೋಕಗಳು ತನಗರಿಯದಂತೆ ತುಟಿಗಳಿಂದ ಹೊರಹೊಮ್ಮುತ್ತವೆ. ತನ್ನ ಈ ಮಧುರ ಶ್ಲೋಕಗಳನ್ನು ಕೇಳಿ ತಾನೇ ವಿಸ್ಮಯಗೊಳ್ಳುತ್ತಿರುವಾಗ ಸರಸ್ವತೀದೇವಿ ಪ್ರತ್ಯಕ್ಷಳಾಗುತ್ತಾಳೆ. ಆತನಲ್ಲಿ ಸುಪ್ತವಾಗಿದ್ದ ಕರುಣೆಯನ್ನು ಚೇತನಗೊಳಿಸುವುದಕ್ಕಾಗಿಯೇ ತಾನು ಯುವತಿಯಾಗಿ ಸೆರೆಸಿಕ್ಕಿದೆನೆಂದೂ ಹೇಳುತ್ತಾಳೆ. ಕೊನೆಯಲ್ಲಿ ತನ್ನ ವೀಣೆಯನ್ನು ಆತನ ಕೈಗಿತ್ತು ಅವನ ಕಾವ್ಯವನ್ನು ಹರಸುತ್ತಾಳೆ.

ಈ ನಾಟಕ ತುಂಬ—ಉತ್ಸಾಹಪೂರ್ಣ ಪಾತ್ರಗಳ ಅಭಿನಯ, ದರೋಡೆಖೋರರ ಗೊಂದಳದ ಹಾಡುಗಳು, ಮದ್ಯಾಮೋದದ ಹಾಡುಗಳು, ಬೇಟೆಯಾಡುವ ದೃಶ್ಯಗಳು; ತದ್ವಿರುದ್ಧವಾಗಿ ವನ್ಯ ಸೌಂದರ್ಯವನ್ನು ಬೀರುವ ವನದೇವತೆಯರ ಹಾಡುಗಳೂ ನೃತ್ಯಗಳೂ ತುಂಬಿ ಮನೋರಂಜನೆಯನ್ನುಂಟುಮಾಡುತ್ತವೆ. ರವೀಂದ್ರನಾಥನು ಸಾಂಪ್ರದಾಯಿಕ ಬಂಗಾಳೀ ಚೌಕಟ್ಟಿನಲ್ಲಿ ಇಂಗ್ಲೀಷು ಮತ್ತು ಐರಿಷ್ ಗೀತಗಳ ಧಾಟಿಯನ್ನು ಅಳವಡಿಸಿಕೊಂಡುದರಿಂದ ಇದರ ಸಂಗೀತವು ಸುಶ್ರಾವ್ಯವಾಗಿದೆ. ದರೋಡೆಖೋರರ ಗೊಂದಳವಾಡುಗಳು ಸ್ವಭಾವಕ್ಕೆ ತಕ್ಕಂತೆ ಸತ್ವಯುತವಾಗಿ ವನ್ಯಸೌಂದರ್ಯವನ್ನು ಉದ್ದೀಪನಗೊಳಿಸುತ್ತವೆ. ಹೀಗಿದ್ದುದರಿಂದಲೇ ಈ ನಾಟಕದ ಸಂಗೀತವು ಬಂಗಾಳದ ಜನತೆಗೆ ನವೀನವಾಗಿ ತೋರಿತು.

ಕವಿವರ್ಯ ರವೀಂದ್ರರು ತಮ್ಮ ಜೀವಿತಕಾಲವೆಲ್ಲ ಸಂಗೀತದಲ್ಲಿ ನವೀನ

ಪ್ರಯೋಗಗಳನ್ನು ಮಾಡುತಿದ್ದರು. ಇದರಿಂದ ಬಂಗಾಳೀ ಸಂಗೀತವು ನವಚೇತನಗೊಂಡು ಬೆಳೆಯುತ್ತಾ ಗಂಭೀರ ರೂಪವನ್ನು ತಾಳಿತು.

ಈ ಸಮಯದಲ್ಲಿ ಜ್ಯೋತಿರಿಂದ್ರನಾಥನು ಪತ್ನೀಸಮೇತನಾಗಿ ಕಲ್ಕತ್ತದಿಂದ ಕೆಲವೇ ಮೈಲುಗಳ ದೂರದಲ್ಲಿ ಗಂಗಾನದಿಯ ಸಮೀಪವಿದ್ದ ಸಣ್ಣ ಪಟ್ಟಣವಾದ ಚಂದ್ರನಾಗೂರಿನಲ್ಲಿ ವಾಸಿಸುತಿದ್ದನು. ರವೀಂದ್ರನಾಥನು ಅವರೊಂದಿಗೆ ವಾಸಿಸುವುದಕ್ಕಾಗಿ ಅಲ್ಲಿಗೆ ಹೋದನು. ಅದು ರಮಣೀಯ ಪ್ರಶಾಂತ ಸ್ಥಳವಾಗಿತ್ತು. ರವೀಂದ್ರನಾಥನು ಗಂಗಾವಾಹಿನಿಯನ್ನು ಸದಾ ಪ್ರೀತಿಸುತಿದ್ದನು. ಅದರ ವರ್ಣವ್ಯತ್ಯಾಸದ ಸೊಬಗನ್ನು ನಿರೀಕ್ಷಿಸುತ್ತಾ ಚಂದ್ರನಾಗೂರಿನಲ್ಲಿ ಎಷ್ಟೋ ಗಂಟೆಗಳನ್ನು ಕಳೆದನು. ಬೆಳಗ್ಗೆ, ಮಧ್ಯಾಹ್ನ, ಮಧ್ಯಾಹ್ನಾನಂತರ ಮತ್ತು ಸೂರ್ಯಾಸ್ತ ಸಮಯಗಳು ಅತಿ ರಮಣೀಯವಾಗಿದ್ದುವು. ರಾತ್ರಿಯಲ್ಲಿ ಹಿಮಕರನು ತನ್ನ ಅಮೃತಕಿರಣಗಳನ್ನು ಸುರಿಸಿ ಗಂಗೆಯನ್ನು ಕ್ಷೀರವಾಹಿನಿಯನ್ನಾಗಿ ಮಾರ್ಪಡಿಸುತಿದ್ದನು. ಈ ಸುಂದರ ದೃಶ್ಯಗಳ ಮಧ್ಯದಲ್ಲಿದ್ದ ಸುಖಸದನದಲ್ಲಿದ್ದುಕೊಂಡು ಹಲವು ಕವನಗಳನ್ನೂ ಗೀತಗಳನ್ನೂ ರಚಿಸಿದನು. ಇವುಗಳನ್ನು ಒಂದಾಗಿ 'ಸಂಜೆಯ ಹಾಡುಗಳು' ಎಂಬ ಪುಸ್ತಕದಲ್ಲಿ ಪ್ರಕಟಿಸಲಾಗಿದೆ. ಈ ಪುಸ್ತಕವು ರವೀಂದ್ರನಾಥನನ್ನು ಆಗಿನ ಬಂಗಾಳೀ ಬರೆಹಗಾರರಲ್ಲೆಲ್ಲ ಪ್ರಸಿದ್ಧನನ್ನಾಗಿ ಮಾಡಿತು. ಇದು ಪ್ರಕಟವಾದ ಕೆಲವೇ ದಿನಗಳಲ್ಲಿ ಪ್ರಸಿದ್ಧ ಕಾದಂಬರಿಕಾರರಾದ ಬಂಕಿಮ್‌ಚಂದ್ರ ಚೆಟರ್ಜಿಯವರು ಒಂದು ವಿವಾಹಸಮಾರಂಭಕ್ಕೆ ಚಿತ್ತೈಸಿದ್ದರು. ಯಜಮಾನನು ಅವರನ್ನು ಪುಷ್ಪಮಾಲೆಯನ್ನಿಕ್ಕಿ ಗೌರವಿಸಿದನು. ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ರವೀಂದ್ರನಾಥನೂ ಬಂದನು. ಆಗ ಬಂಕಿಮರು ತಮ್ಮ ಹೆಗಲಮೇಲಿದ್ದ ಹಾರವನ್ನೆತ್ತಿ ಯಜಮಾನನನ್ನುದ್ದೇಶಿಸಿ 'ಮಿತ್ರಾ, ನೀನು ನನಗೆ ಮಾಡಿದ ಗೌರವವು ನಿಜವಾಗಿಯೂ ಈತನಿಗೆ ಸಲ್ಲತಕ್ಕದ್ದು. ನೀನು ಇವನ "ಸಂಧ್ಯಾಗೀತಗಳನ್ನು" ಓದಲಿಲ್ಲವೇ?' ಎನ್ನುತ್ತಾ ಹಾರವನ್ನು ರವೀಂದ್ರನಾಥನ ಕೊರಳಿಗೆ ಹಾಕಿದರು.

1882ರಲ್ಲಿ ಅಂದರೆ ರವೀಂದ್ರನಾಥನ ಇಪ್ಪತ್ತನೆಯ ವಯಸ್ಸಿನಲ್ಲಿ ಆತನ ಜೀವನವನ್ನೇ ಮಾರ್ಪಡಿಸಿ, ಕಾವ್ಯರಚನೆಗೆ ನವೀನ ದೃಷ್ಟಿಯನ್ನಿತ್ತ ಒಂದು ಅನುಭವವಾಗಿತ್ತು. ಮಾನವನ ಎಷ್ಟೋ ಸಾಹಸ ಕಾರ್ಯಗಳಂತೆ ಇದೂ ಮಾನಸಿಕ ಸಾಹಸಕೃತ್ಯವಾಗಿತ್ತಲ್ಲದೆ ದೈಹಿಕವಾಗಿರಲಿಲ್ಲ. ಅವನು ಕಲ್ಕತ್ತದ ವಸ್ತುಸಂಗ್ರಹಾಲಯದ ಸಮೀಪದ ಸಡ್ಡರ್ ಬೀದಿಯ ಒಂದು ಮನೆಯಲ್ಲಿ ತಂಗಿದ್ದನು. ಬೀದಿಯು ಪೂರ್ವದಿಂದ ಪಶ್ಚಿಮಕ್ಕೆ ಹಾದುಹೋಗುತ್ತದೆ.

ಪೂರ್ವದ ತುದಿಯಲ್ಲಿ ದೂರದಲ್ಲಿ ಮರಗಳ ತೋಟವೊಂದಿದೆ. ಒಂದು ದಿನ ರವೀಂದ್ರನಾಥನು ಮನೆಯ ಜಗಲಿಯಲ್ಲಿ ನಿಂತು ಮರಗಳ ಹಿಂಬದಿಯ ಸೂರ್ಯೋದಯವನ್ನು ನಿರೀಕ್ಷಿಸುತಿದ್ದನು. 'ನಾನು ಹೀಗೆ ಕಾಯುತ್ತಾ ನಿಂತಾಗ', ಅವನು ಬರೆಯುತ್ತಾನೆ, 'ನನ್ನ ನೋಟವನ್ನು ಬಹುಕಾಲದಿಂದ ಮುಸುಕಿದ್ದ ಮಂಜಿನ ಪರದೆಯನ್ನು ಫಕ್ಕನೆ ಮೇಲಕ್ಕೆತ್ತಿದ ಅನುಭವವಾಯಿತು; ಮತ್ತು ಭೂಮಿಯ ಮೇಲೆ ಪಸರಿಸಿದ ಅರುಣೋದಯದ ಹೊಂಬೆಳಕು ಸಂತೋಷದ ಅಂತಃಪ್ರಭೆಯನ್ನು ಸಾಕ್ಷಾತ್ಕರಿಸಿತು'. ಇನ್ನೊಂದೆಡೆಯಲ್ಲಿ ತನ್ನ ಅನುಭವವನ್ನು 'ಸೌಂದರ್ಯಾನಂದಲಹರಿಗಳು ಎಲ್ಲೆಲ್ಲೂ ಉಕ್ಕೇರುತ್ತಿವೆ' ಎಂದು ವರ್ಣಿಸುತ್ತಾನೆ. ಇಷ್ಟರತನಕ ಲೋಕವನ್ನು ಹೊರಗಣ್ಣಿನಿಂದ ಮಾತ್ರವೇ ನೋಡುತಿದ್ದಂತೆಯೂ ಬಾಹ್ಯಸೌಂದರ್ಯವನ್ನು ಮಾತ್ರ ಕಂಡಿದ್ದಂತೆಯೂ ಭಾಸವಾಯಿತು. ಈಗ ತನ್ನ ಪೂರ್ಣ ಮನಸ್ಸೂ ಅಂತರಾತ್ಮವೂ ವಸ್ತುಗಳನ್ನು ವಾಸ್ತವವಾಗಿದ್ದಂತೆಯೇ ನೋಡುತ್ತವೆ ಎಂಬಂತೆ ತೋರಿತು. ಎಲ್ಲವೂ ಚೈತನ್ಯ ಪೂರ್ಣವಾಗಿತ್ತು; ಅತ್ಯಲ್ಪ ವಸ್ತುಗಳಲ್ಲಿಯೂ ನವೀನಾಶ್ಚರ್ಯಗಳಿರುವಂತೆ ತೋರಿತು. ಅವು ಶಾಶ್ವತ ಸೌಂದರ್ಯಾನಂದ ಜೀವಿಗಳಾಗಿ ಶೋಭಿಸಿದುವು. ಇಬ್ಬರು ಹುಡುಗ ಗೆಳೆಯರು ಕೈ ಕೈ ಹಿಡಿದುಕೊಂಡು ಸಂತೋಷದಿಂದ ನಗುತ್ತಾ ಬೀದಿಯಲ್ಲಿ ಹೋಗುವುದನ್ನು ನೋಡಿದನು; ಇದು ಅಲೌಕಿಕಾನಂದದ ಒಂದು ಅಂಶ. ಕರುವಿನ ಬಳಿಯಲ್ಲಿದ್ದ ದನವನ್ನೂ ಶಿಶುವ ನ್ನೆತ್ತಿಕೊಂಡಿದ್ದ ಮಾತೆಯನ್ನೂ ನೋಡಿದನು; ಇದು ಅಲೌಕಿಕ ಪ್ರೇಮದ ಏಕಾಂಶ. ಲೋಕದಲ್ಲಿ ಸಾಮಾನ್ಯವಾದುದೊಂದೂ ಇಲ್ಲ. ಸ್ವಲ್ಪ ಸಮಯಾನಂತರ, ಹಿಂದೆ ಯಾವಾಗಲೂ ಬಂದು ತನ್ನನ್ನು ನೋಯಿಸುತಿದ್ದ ವ್ಯಕ್ತಿಯೊಬ್ಬನು ಇಂದೂ ನೋಡಲು ಬಂದನು. ಈಗ ಅವನನ್ನು ಸ್ವಾಗತಿಸಿದನಲ್ಲದೆ ಅವನ ಒಡನಾಟದಲ್ಲಿಯೂ ಒಂದು ಬಗೆಯ ಆನಂದಾಭಿರುಚಿಯಿದೆ ಎಂಬುದನ್ನು ಮನಗಂಡನು.

ಈ ಅದ್ಭುತ ಅನುಭವವು ಅದೇ ದಿನ ಕಾರ್ಯರೂಪದಲ್ಲಿ ಕಾಣಿಸಿಕೊಂಡಿತು. 'ನನ್ನ ಈ ಮೊದಲ ಆಶ್ಚರ್ಯಾನುಭವವಾದಂದು ನಾನು ಬರೆದ ಕವನವೇ "ಕಾರಂಜಿಯ ಉಗಮ"'. ರವೀಂದ್ರನಾಥನು ಮುಂದುವರಿಸುತ್ತಾ— 'ಸೂರ್ಯಸ್ಪರ್ಶವಾದೊಡನೆ ಘನೀಭೂತ ಪ್ರಪಾತವು ದ್ರವೀಭವಿಸಿ ನಿರ್ಝರವಾಗಿ ಭೋರ್ಗರೆಯುತ್ತಾ ಸ್ವೇಚ್ಛಾವಿಹಾರಿಯಾಗಿ, ತ್ಯಾಗಮಯಿಯಾಗಿ, ಕೊನೆಯಲ್ಲಿ ಶಾಶ್ವತವಾಗಿ ಸಮುದ್ರದೊಂದಿಗೆ ಐಕ್ಯವಾಯಿತು' ಎಂದನು. ಘನೀಭೂತ ಹಿಮಾಲಯದ ಗುಹೆಗಳಲ್ಲಿ ಅತಿಶೀತಳವಾದ ಸೆರೆಮನೆಯಲ್ಲಿ

ಸಿಕ್ಕಿಬಿದ್ದ ನದಿಯ ಸುಂದರ ಚಿತ್ರವು ಇಲ್ಲಿದೆ; ಮತ್ತೆ ಸೂರ್ಯಪ್ರಕಾಶದಲ್ಲಿ ಮುನ್ನುಗ್ಗುತ್ತಿರುವ ನದಿಯ ಆನಂದಾತಿರೇಕ, ಸ್ವಾತಂತ್ರ್ಯೋತ್ಸವ, ಸ್ವಾರ್ಥ ತ್ಯಾಗದಿಂದುಂಟಾದ ಸಂತೋಷ, ಕೊನೆಯಲ್ಲಿ ತನ್ನನ್ನೇ ಸಮುದ್ರನಿಗರ್ಪಿಸಿ ಕೊಂಡ ಸಂತೃಪ್ತಿ—ಇವೆಲ್ಲವನ್ನೂ ಕ್ರಮವಾಗಿ ಪದ್ಯರೂಪದಲ್ಲಿ ವರ್ಣಿಸು ತ್ತಾನೆ.

'ಮುಂಜಾನೆಯ ಕೆಂಗದಿರನ ಸ್ಪರ್ಶಕೆ
ಎನ್ನಾತ್ಮೋದಯವಾಗುವುದು ||
ಮುಂಜಾನೆಯ ಹಕ್ಕಿಯ ಹಾಡೆನ್ನದೆ |
ಗುಂಡಿಯ ಕತ್ತಲ ಬಾರಿಪುದು ||
ಎಂತೋ ಏನೋ ನಾನೊಂದರಿಯೆನು |
ಇಂತೇಕಾದುದೊ ಇನಿತೊಂದು ದಿನದಿ ||
ಸತ್ಯ ಚಿದಾತ್ಮನ ಹೊಡೆದೆಬ್ಬಿಸಿತೈ |
ಪೂರ್ತಿಯ ತಳಮಳದುಬ್ಬರದಿ |
ಹೊಡೆದೆಬ್ಬಿಸಿತೈ ಬಿಡದೆಬ್ಬಿಸಿತೈ ||
ಜೀವನದಾಶೆಯು ಬಲವಿಹುದು |
ಜೀವನದಾಕಾಂಕ್ಷೆಯು ಮೇಲಿಹುದು |
ಜೀವನನೆಂದಿಗುಪೇಕ್ಷಿಸಲರಿದು ||'

ರವೀಂದ್ರನಾಥರ ಜೀವನದಲ್ಲಿ ಆರಂಭದಲ್ಲಿದ್ದ ಅನಂತಶೋಭಾದೃಷ್ಟಿ ಕ್ರಮೇಣ ಮಾಸುತ್ತಾ ಬಂದಿತಾದರೂ ಅದರ ಪರಿಣಾಮವು ಶಾಶ್ವತವಾಗಿ ಉಳಿಯಿತು. ಸಾಮಾನ್ಯ ವಸ್ತುಗಳ ಕಡೆಗಿದ್ದ ಆಶ್ಚರ್ಯಕರವಾದ ನೋಟವು ಅವರ ಎಲ್ಲಾ ಕವನಗಳಲ್ಲಿಯೂ ಕತೆಗಳಲ್ಲಿಯೂ ಕಂಡುಬರುತ್ತದೆ; ನಮ್ಮನ್ನೂ ಅವರ ನೋಟದಿಂದ ನೋಡುವಂತೆ ಮಾಡಲು ಪ್ರಯತ್ನಿಸುತ್ತಾರೆ.

ಮರುವರ್ಷ ರವೀಂದ್ರನಾಥನು ಭಾರತದ ಪಶ್ಚಿಮ ಕರಾವಳಿಯಲ್ಲಿರುವ ಕಾರವಾರಕ್ಕೆ ಸತ್ಯೇಂದ್ರನ ಮನೆಗೆ ಹೋದನು. ಇಲ್ಲಿಯೂ ಅವನಾತ್ಮವು ಸ್ನೇಹ ಸೌಂದರ್ಯಗಳಿಂದ ಪೂರ್ಣವಾಯಿತು. ಸಮುದ್ರ ರಾಮಣೀಯಕವು ಅವನ ಆತ್ಮದಲ್ಲಿ ಐಕ್ಯವಾಗಿ ಸ್ಫೂರ್ತಿದಾಯಕವಾದ ಕವನಗಳು ಹೊರ ಹೊಮ್ಮಿದುವು. ರವೀಂದ್ರನಾಥನು ಸದಾ ಚುರುಕಾಗಿದ್ದನು, ಕಾರ್ಯತತ್ಪರ ನಾಗಿದ್ದನು. ಕಾರವಾರದಲ್ಲಿ ಕಳೆದ ದಿನಗಳು ಎಲ್ಲಾ ಬಗೆಯ ಚಟುವಟಿಕೆ ಯನ್ನೊಳಗೊಂಡಿದ್ದುವು—ವನಭೋಜನಗಳು, ಪಂದ್ಯಾಟಗಳು, ಚಂದ್ರಿಕಾ

ವಿಹಾರಗಳು; ಜೊತೆಯಲ್ಲಿ ಸಾಹಿತ್ಯಸೃಷ್ಟಿಯೂ ಸಾಗುತಿತ್ತು. ಕಾರವಾರದಲ್ಲಿದ್ದಾಗ ಬರೆದುವುಗಳಲ್ಲಿ ಮುಖ್ಯವಾಗಿ ಕುತೂಹಲಕಾರಿಯಾದುದು ‘ಪ್ರಕೃತಿಯ ಪ್ರತೀಕಾರ’ವೆಂಬ ನವೀನ ನಾಟಕ. ಇದನ್ನೇ ಮತ್ತೆ ಇಂಗ್ಲೀಷಿಗೆ ಪರಿವರ್ತಿಸಿ ‘ಸನ್ಯಾಸಿ’ ಎಂಬ ಹೊಸ ಹೆಸರನ್ನಿಟ್ಟನು. ಈ ನಾಟಕವು ಆತನ ದೃಷ್ಟಿಯಲ್ಲಿದ್ದ ಮೊದಲ ಸಂದೇಶವನ್ನು ಇನ್ನೊಂದು ಬಗೆಯಾಗಿ ತಿಳಿಸುತ್ತದೆ. ಮಿತ್ರಾನು ರಾಗ ಮತ್ತು ಪ್ರಕೃತಿಸೌಂದರ್ಯಗಳು ಮಾನವನ ಸತ್ಯಶೋಧನೆಗೆ ತಡೆಯನ್ನುಂಟು ಮಾಡಲಾರವು ಎಂಬ ತತ್ವವನ್ನು ಇದು ಕಲಿಸುತ್ತದೆ. ಪ್ರತಿಯಾಗಿ, ಸತ್ಯವು ಮಾನವನೊಂದಿಗೆ ವ್ಯವಹರಿಸುವ ಭಾಷೆಯೇ ಪ್ರೇಮಸೌಂದರ್ಯಗಳು ಮತ್ತು ಸತ್ಯಶೋಧನೆಗಾಗಿ ನಾವು ಲೋಕವನ್ನೇ ತ್ಯಜಿಸಬೇಕಾಗಿಲ್ಲ – ಎಂಬ ಅಮೂಲ್ಯ ಸಂದೇಶವನ್ನು ಸಾರುತ್ತದೆ.

ಮೊದಲನೆಯ ದೃಶ್ಯದಲ್ಲಿ ಸನ್ಯಾಸಿಯೊಬ್ಬನು ತನ್ನ ಗುಹೆಯ ಹೊರ ಭಾಗದಲ್ಲಿ ಕುಳಿತು ತಾನು ಲೌಕಿಕ ಕಾಮನೆಗಳಿಂದ ಸ್ವತಂತ್ರನಾಗಿದ್ದೇನೆಂದು ಡಂಭಕೊಚ್ಚುತಿದ್ದಾನೆ. ತಾನು ಇನ್ನು ನಿರಾತಂಕವಾಗಿ ಜನರೊಂದಿಗೆ ಬೆರೆತು ಜೀವಿಸಬಹುದೆಂದು ನಿರ್ಧರಿಸುತ್ತಾನೆ. ‘ಭಯತೃಷ್ಣೆಗಳಿಂದ ಬಿಡಲ್ಪಟ್ಟ ನಾನು ಮಂಜುಮಾಯವಾಗಿ ಜ್ಞಾನವು ನಿರ್ಮಲವಾಗಿ ಪ್ರಕಾಶವಾಗಿ ಹೊಳೆಯು ತ್ತಿರಲು, ಸುಳ್ಳುಕಂತೆಗಳ ರಾಜ್ಯಕ್ಕೆ ಹೋಗಿ ಅದರ ಎಡೆಯಲ್ಲಿ ಸ್ಥಿರವಾಗಿ ನಿರ್ಲಿಪ್ತನಾಗಿ ಕುಳಿತುಕೊಳ್ಳುತ್ತೇನೆ’ ಎನ್ನುತ್ತಾನೆ. ಅಂತೆಯೇ ಎರಡನೆಯ ದೃಶ್ಯದಲ್ಲಿ ಆತನು ಮಾರ್ಗದ ಬದಿಯಲ್ಲಿ ದಾರಿಹೋಕರನ್ನು ನೋಡುತ್ತಾ ಕುಳಿತುಕೊಂಡುದನ್ನು ನಾವು ನೋಡುತ್ತೇವೆ. ದಾರಿಯಲ್ಲಿ ಗೆಳೆಯರಿಲ್ಲದ ಅನಾಥ ‘ವಾಸಂತಿ’ ಎಂಬ ಬಾಲಿಕೆಯೊಬ್ಬಳು ಬರುತ್ತಾಳೆ. ಅವಳ ತಂದೆಯು ಜಾತಿಪದ್ಧತಿಯನ್ನು ಉಲ್ಲಂಘಿಸಿದ್ದುದರಿಂದ ಪ್ರತಿಯೊಬ್ಬನೂ ಆಕೆಯನ್ನು ಜಾತಿ ಭ್ರಷ್ಟೆ ಎನ್ನುತ್ತಾನೆ. ಬಾಹ್ಯಸ್ಪರ್ಶಾದಿಗಳಿಂದ ವಿಕಾರಗೊಳ್ಳದ ಆ ಸನ್ಯಾಸಿ ಆಕೆಯನ್ನು ಹತ್ತಿರ ಕುಳ್ಳಿರಿಸಿ ಮೈದಡವುತ್ತಾನೆ. ಆ ಅನಾಥ ಬಾಲಿಕೆ ಅವನ ಭಾವನೆಗಳನ್ನರಿಯಳು, ಆದರೆ ಆತನು ತನ್ನನ್ನು ಕಾಪಾಡುವನೆಂಬುದನ್ನು ತಿಳಿದು ಹರ್ಷಗೊಳ್ಳುತ್ತಾಳೆ. ಅವಳು ಅವನ ಪಕ್ಕದಲ್ಲಿ ಸುಖವಾಗಿ ನಿದ್ರಿಸುತ್ತಾಳೆ. ಸನ್ಯಾಸಿಯು ಅವಳನ್ನು ನೋಡುತ್ತಿದ್ದಂತೆ ಅವನ ಹೃದಯದಲ್ಲಿ ಲೌಕಿಕ ಪ್ರೇಮವು ಮತ್ತೆ ಪ್ರಬಲವಾಗುತ್ತದೆ. ವಾಸಂತಿಯು ಎಚ್ಚತ್ತಾಗ ಅವನ ಕೈಯನ್ನು ಪ್ರೀತಿಯಿಂದ ತನ್ನ ಕೋಮಲವಾದ ಕೆನ್ನೆಗೆ ಸವರುತ್ತಾ ನಿರ್ಮಲ ಭಾವದಿಂದ ಕೂಡಿದವಳಾಗಿ, ಹತ್ತಿರದಲ್ಲಿದ್ದ ನೀಲಬಣ್ಣದ ಹೂಗಳಿಂದ ಕೂಡಿದ ಬಳ್ಳಿಯೊಂದನ್ನು ತೋರಿಸಿ ತನ್ನಂತೆಯೇ ಇದೂ ಬಲವಾದ ಮರವೊಂದನ್ನು

ಆಲಂಗಿಸಲು ಬಯಸುತ್ತಿದೆ ಎನ್ನುತ್ತಾಳೆ. ಆದರೆ ಈಗ ಸನ್ಯಾಸಿಯು ತನ್ನಲ್ಲುಂಟಾದ ವಿಕಾರಗಳಿಂದ ಭಯಗೊಳ್ಳುತ್ತಾನೆ. ಉಗ್ರನಾಗಿ ಬಳ್ಳಿಯನ್ನು ಕಿತ್ತೊಗೆದು ಅನಾಥ ಬಾಲಿಕೆಯನ್ನು ತಳ್ಳಿಬಿಡುತ್ತಾನೆ! 'ಅಪ್ಪಾ! ನೀನು ನನ್ನನ್ನು ತೊರೆದರೆ ನಾನು ಸಾಯುವುದೇ ಸರಿ' ಅವಳು ಬೇಡಿಕೊಳ್ಳುತ್ತಾಳೆ. ಆದರೆ ಅವನು ಇದೊಂದನ್ನೂ ಲಕ್ಷಿಸದೆ ಆ ಸ್ಥಳವನ್ನೇ ಬಿಟ್ಟು ಓಡಿಹೋಗುತ್ತಾನೆ.

ಮೂರನೆಯ ದೃಶ್ಯದಲ್ಲಿ ಆತನು ಪ್ರಕೃತಿಯ ಸಕಲ ಸೌಂದರ್ಯಗಳ ಬೀಡಾದ ಪರ್ವತವೊಂದರ ಪಕ್ಕದಲ್ಲಿ ಕುಳಿತುದನ್ನು ನೋಡುತ್ತೇವೆ. ಈಗ ಆತನು ಪೂರ್ಣ ಬದಲಾಗಿದ್ದಾನೆ. ಹರಕು ಅರಿವೆಯುಟ್ಟ ಚಿಕ್ಕ ಹುಡುಗಿಯೊಬ್ಬಳು ಗಟ್ಟಿಯಾಗಿ ಕೂಗುತ್ತಾ ತನ್ನ ತಂದೆಯ ಬಳಿಗೆ ಓಡಿಬರುತ್ತಾಳೆ. ಅವಳ ಸ್ವರ, ರೂಪು, ತಂದೆಯ ಪ್ರಶ್ನೆಗಳಿಗೆ ಆಕೆ ಕೊಡುತ್ತಿರುವ ನಿಷ್ಕಲ್ಮಷವಾದ ಉತ್ತರ,—ಎಲ್ಲವೂ ಆತನನ್ನು ಮುದ್ದು ವಾಸಂತಿಯನ್ನು ನೆನೆಯುವಂತೆ ಮಾಡುತ್ತವೆ. ಈಗ ಅವನು ತನ್ನಲ್ಲುದಿಸಿದ ಪ್ರೇಮಕ್ಕಾಗಿ ನಾಚುವುದಿಲ್ಲ. ಶತ್ರುವನ್ನೋಡಿಸುವಂತೆ ಬಳ್ಳಿಯನ್ನು ಕಿತ್ತೊಗೆಯಲು ಯತ್ನಿಸುವುದಿಲ್ಲ. ಅನಾಥಳಾದ ವಾಸಂತಿಯನ್ನು ಹುಡುಕಿ ಹಿಡಿದು ಸಮಾಧಾನ ಪಡಿಸಬೇಕೆಂದು ಆಶಿಸುತ್ತಾನೆ. ಆದುದರಿಂದಲೇ ಕೊನೆಯ ದೃಶ್ಯದಲ್ಲಿ ಸನ್ಯಾಸಿಯು ತನ್ನ ದಂಡ ಭಿಕ್ಷಾಪಾತ್ರೆಗಳನ್ನು ತೊರೆದು ಹಳ್ಳಿಯಲ್ಲಿ ಸಂಚರಿಸುತ್ತಾ ಪ್ರಣಯದಲ್ಲಿಯೂ ಮಾನವ ಸಾಮಾನ್ಯ ಜಗತ್ತಿನಲ್ಲಿಯೂ ತನಗಿದ್ದ ನವೀನ ವಿಶ್ವಾಸವನ್ನು ಸಾರಿ ಹೇಳುತ್ತಿರುವುದನ್ನು ನೋಡುತ್ತೇವೆ. 'ಸೂರ್ಯನ ಹಾಗೂ ನಕ್ಷತ್ರಗಳ ಬೆಳಕನ್ನು ಕಡೆಗಣಿಸಿ ಮಿಂಚುಹುಳದ ಬೆಳಕಿನ ಸಹಾಯದಿಂದ ದಾರಿನಡೆಯುವ ಓ ಹುಚ್ಚ! . . . ನಾನು ಅವ್ಯಕ್ತವಾದ ಲೌಕಿಕ ಬಂಧನದಿಂದ ಬಿಡುಗಡೆ ಹೊಂದಿದ್ದೇನೆ . . . ಅಲ್ಲ — ಸುತ್ತುಮುತ್ತಲಿನ ವಸ್ತು, ರೂಪ ಮತ್ತು ಉದ್ದೇಶಗಳಲ್ಲಿ ಸ್ವತಂತ್ರನಾಗಿದ್ದೇನೆ. ಪರಿಮಿತವೇ ನಿಜವಾದ ಅಪರಿಮಿತ; ಪ್ರಣಯವೇ ಅನಂತ ಪ್ರಣಯ.' ಪ್ರತಿಯೊಬ್ಬ ದಾರಿಹೋಕನನ್ನು ಕುರಿತು 'ವಾಸಂತಿಯ ಕಂಡಿರೇ!' ಎಂದು ಕೇಳುತ್ತಾನೆ. ಕೊನೆಗೆ ಯಾರೋ ಹೇಳುತ್ತಾರೆ, ಹುಡುಗಿ ತೀರಿಕೊಂಡಳೆಂದು!

1883ರ ಅಂತ್ಯದಲ್ಲಿ ರವೀಂದ್ರನಾಥನು ಮೃಣಾಳಿನೀದೇವಿಯನ್ನು ವಿವಾಹವಾದನು. ಕೆಲವೇ ತಿಂಗಳುಗಳ ಅನಂತರ ಆತನು ಮಹತ್ವವಾದ ದುಃಖವನ್ನು ಅನುಭವಿಸಬೇಕಾಯಿತು; ಜ್ಯೋತಿರಿಂದ್ರನಾಥನ ಪತ್ನಿ, ಆತನ ಪ್ರೀತಿಯ ಅತ್ತಿಗೆ ತೀರಿಕೊಂಡಳು. ಅಂತಹ ಗಾಢವಾದ ಮೈತ್ರಿಯು ಹೀಗೆ ಕೊನೆಗೊಂಡಿತು. ಆತನ ತಾಯಿಯ ಮರಣಾನಂತರ ಅವಳು ಅವನ ಆಪ್ತಳಾಗಿ

ಪ್ರೋತ್ಸಾಹಿಸಿದ್ದಳು. ಅವಳ ಆಗಮನದಿಂದ ಇಡಿ ಮನೆಯೇ ಸುಖಸಾಗರದಲ್ಲಿ ತೇಲಾಡಿತ್ತು. ಈಗ ಆ ಹಿಂದಿನ ಸ್ನೇಹಪಾಶ ವಿಚ್ಛೇದವಾಯಿತು. ರವೀಂದ್ರನಾಥನ ವಿವಾಹದೊಂದಿಗೆ ಅವನ ಜೀವನದ ಹೊಸ ಅಧ್ಯಾಯ ಮತ್ತೆ ಆರಂಭವಾಯಿತು.

## ಅಧ್ಯಾಯ ೫.

## 'ಬಂಗಾರದ ಬಂಗಾಳ'

ಮದುವೆಯಾದ ಹದಿನೈದು ವರ್ಷಗಳ ಕಾಲ ರವೀಂದ್ರನಾಥನು ಹೆಚ್ಚಾಗಿ ಬಂಗಾಳದಲ್ಲಿಯೇ ವಾಸಿಸುತ್ತಿದ್ದು ತನ್ನ ಕೆಲಸಗಳನ್ನು ಪೂರೈಸಿದನು. 1884–1889ರ ಮಧ್ಯಕಾಲದಲ್ಲಿ ಹೆಚ್ಚು ಕಡಿಮೆ ಮೂರು ತಿಂಗಳು ಯುರೋಪಿನ ಪ್ರವಾಸವನ್ನು ಕೈಕೊಂಡನು. ಈ ಹದಿನೈದು ವರ್ಷಗಳಲ್ಲಿ ಆತನಿಗೆ ಇಬ್ಬರು ಗಂಡು ಮಕ್ಕಳೂ ಮೂವರು ಹೆಣ್ಣುಮಕ್ಕಳೂ ಜನಿಸಿದರು. ಕೌಟುಂಬಿಕ ಸಕಲ ಸುಖವನ್ನೂ ಆತನು ಅನುಭವಿಸಿದನು. ಹಲವು ಹಾಡುಗಳನ್ನು, ನಾಟಕಗಳನ್ನು ಮತ್ತು ಗೀತಾನಾಟಕಗಳನ್ನು ರಚಿಸಿ ಪ್ರಕಟಿಸಿದನು. ಅವನ ಅಣ್ಣ ಸತ್ಯೇಂದ್ರನಾಥನ ಪತ್ನಿ ಮಕ್ಕಳಿಗಾಗಿ 'ಬಾಲಕ' ಪತ್ರಿಕೆಯನ್ನು ಹೊರಡಿಸಿದ್ದಳು. ರವೀಂದ್ರನಾಥನು ಹಲವು ಕತೆಗಳನ್ನೂ ಕವನಗಳನ್ನೂ ಲೇಖನಗಳನ್ನೂ ಬರೆದು ಈ ಪತ್ರಿಕೆಗೂ ಹಾಗೆಯೇ 'ಭಾರತಿ'ಗೂ ಕಳುಹಿದನು. ಕಾಲ ಕಳೆದಂತೆ ಆತನ ಕೀರ್ತಿ ವಿಶಾಲವಾಯಿತು. ಜನರು ಅವನು ಹೇಳುತಿದ್ದ ವಿಷಯಗಳನ್ನು ಆಸಕ್ತಿಯಿಂದ ಕೇಳತೊಡಗಿದರು. ಅವನು ಸಾರ್ವಜನಿಕ ಚಟುವಟಿಕೆಗಳಲ್ಲಿ ಅಧಿಕವಾಗಿ ಭಾಗವಹಿಸಿದನು. ಧರ್ಮದ ಕಡೆಗಿದ್ದ ಆತನ ಪ್ರೇಮವೂ, ನ್ಯಾಯವೆಂದು ಕಂಡುದನ್ನು ಜನಪ್ರಿಯವಲ್ಲದಿದ್ದರೂ ಪ್ರತಿಪಾದಿಸುವಂಥಾ ಎದೆಗಾರಿಕೆಯೂ ಆತನ ಸಾರ್ವಜನಿಕ ಕಾರ್ಯಾರಂಭದಲ್ಲಿ ಎದ್ದು ತೋರುತಿದ್ದುವು.

ಬ್ರಹ್ಮಸಮಾಜ ಸ್ಥಾಪಕರಲ್ಲಿ ಮತ್ತು ಅದರ ಮುಂದಾಳುಗಳಲ್ಲಿ ದೇವೇಂದ್ರನಾಥನೂ ಒಬ್ಬನು. ಈ ಮಹಾ ಧಾರ್ಮಿಕ ಸಂಘವು ದೇವರೊಬ್ಬನೇ ಎಂದು ನಂಬಿ ಪೂಜಿಸುವುದು; ಮೂರ್ತಿಪೂಜೆಯನ್ನು ಪ್ರತಿಭಟಿಸುವುದು ಮತ್ತು ಹಲವು ಸಮಾಜ ಸುಧಾರಣೆಗಳನ್ನು ಉತ್ತೇಜಿಸುವುದು. ರವೀಂದ್ರನಾಥನ ಕಾಲಕ್ಕೆ ಬ್ರಹ್ಮಸಮಾಜವು ಮೂರಾಗಿ ಒಡೆದಿತ್ತು; ಠಾಗೋರು

ಕುಟುಂಬದವರು ಆದಿಬ್ರಹ್ಮಸಮಾಜದವರಾಗಿದ್ದರು. ರವೀಂದ್ರನಾಥನು ಮದುವೆಯಾದ ಒಂದೆರಡು ವರ್ಷಗಳಲ್ಲಿ ಈ ಸಂಗಡದ ಕಾರ್ಯದರ್ಶಿಯಾಗಿ ಮತ್ತೆ ಹಲವು ವರ್ಷಗಳ ಕಾಲ ಕೆಲಸಮಾಡಿದನು. ಸಮಾಜದವರು ಪೂಜಾ ಕಾಲದಲ್ಲಿ ಹಾಡುವುದಕ್ಕೆ ಯೋಗ್ಯವಾದ ಗೀತಗಳನ್ನು ರಚಿಸಿದನು. ಮತ್ತು ಸಮಾಜದ ಸಭೆಗಳಲ್ಲಿ ಆಗಾಗ ಭಾಷಣಗಳನ್ನಿತ್ತನು. ಆತನ ಈ ಭಾಷಣಗಳು ಕೇಳುವವರಲ್ಲಿ ಸ್ಫೂರ್ತಿಯನ್ನುಂಟುಮಾಡುತಿದ್ದುವು; ಯಾಕೆಂದರೆ, ಅವು ನಿಜ ವಾಗಿಯೂ ಕವಿಯ ಅನುಭವದ ಮತ್ತು ಆಳವಾದ ಯೋಚನೆಯ 'ಫಲ' ವಾಗಿದ್ದುವು. ಹೇಗಿದ್ದರೂ ಮುಂದಿನ ವರ್ಷಗಳಲ್ಲಿ ರವೀಂದ್ರನಾಥನು ಬ್ರಹ್ಮ ಸಮಾಜದ ಕಾರ್ಯಕಲಾಪಗಳಲ್ಲಿ ವಿಶೇಷ ಪಾತ್ರವಹಿಸುವುದನ್ನು ಕ್ರಮವಾಗಿ ನಿಲ್ಲಿಸಿಬಿಟ್ಟನು. 'ನಾನು ಮಾಗಿದ ಬೀಜದಂತೆ,' ಅವನು ಹೇಳುತ್ತಿದ್ದನು. 'ಮಾಗಿದ ಬೀಜವು ಸಮಯ ಬಂದಾಗ ತಾನು ಬೆಳೆದ ಮರವನ್ನು ಮೆಲ್ಲಗೆ ಬಿಟ್ಟು ಸ್ವತಂತ್ರ ನವಜೀವನವನ್ನು ಮಾಡುತ್ತದೆ.' ರವೀಂದ್ರನಾಥನು ತಾನು ಬೆಳೆದ ಬ್ರಹ್ಮಸಮಾಜ ವೃಕ್ಷಕ್ಕೆ ತನ್ನ ಸೇವೆಯನ್ನು ಸಲ್ಲಿಸಿ, ಋಣವಿಮುಕ್ತ ನಾದನು. ತನ್ನ ಸತ್ಯಸಂಶೋಧನೆ—ಬ್ರಹ್ಮಸಮಾಜವಿರಲಿ, ಯಾವುದೇ ಧಾರ್ಮಿಕ ಸಂಘವಿರಲಿ,—ಅವುಗಳ ಬಂಧನದೊಳಗೆ ನಿಲ್ಲಲಾರದೆಂಬ ಅನು ಭವವಾಗತೊಡಗಿತು. ಮಾನವರನ್ನು ಒಂದೇ ಸಮಾಜವನ್ನಾಗಿ ಮಾಡಬಲ್ಲ ಪರಮಾತ್ಮನ ಅಮೋಘ ಶಕ್ತಿಯನ್ನು ಆತನು ನಂಬಿದ್ದನು. ಬೇರೆಬೇರೆ ಧಾರ್ಮಿಕ ಸಂಘಗಳು ಮಾನವರನ್ನೊಂದುಗೂಡಿಸುವುದರ ಬದಲು ಬೇರ್ಪಡಿಸುವುವು ಎಂಬುದನ್ನು ಮನಗಂಡನು. ಆದುದರಿಂದಲೇ ಈ ಸಂಘಗಳಲ್ಲಿ ಆತನಿಗೆ ವಿಶ್ವಾಸವಿರಲಿಲ್ಲ. ಅವನು ತನ್ನ ಮತದ ಕುರಿತು ಮಾತನಾಡಿದಾಗಲೆಲ್ಲ ಸರಳವಾಗಿ ಮಾನವ ಧರ್ಮದ ಕುರಿತೇ ಮಾತಾಡುತಿದ್ದನು.

ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಹ್ಮಸಮಾಜವೂ ಇಂಥಾ ಇನ್ನಿತರ ಸಂಘಗಳೂ ಹಿಂದೂ ಧರ್ಮಪದ್ಧತಿಯನ್ನು ಕಟುವಾಗಿ ಟೀಕಿಸುತಿದ್ದುವು. ಕೆಲವು ಸನಾತನ ಪದ್ಧತಿಗಳನ್ನು ಸಂಪೂರ್ಣವಾಗಿ ತೊಡೆದುಹಾಕಬೇಕೆಂದಿದ್ದರು. ತಮಗೆ ಹಿತವೆಂದೂ ಸಾಧುವೆಂದೂ ತೋರಿದ ಪರಕೀಯಾಭಿಪ್ರಾಯಗಳನ್ನು ಸ್ವಾಗತಿಸಿದರು. ಎಷ್ಟೋ ಸನಾತನ ಧರ್ಮಾವಲಂಬಿಗಳು, ಈ ಆಧುನಿಕ ಸುಧಾರಣೆಗಳನ್ನು ಕಾರ್ಯರೂಪಕ್ಕೆ ತಂದರೆ ಹಿಂದೂ ಧರ್ಮವು ಸಂಪೂರ್ಣ ನಶಿಸಿಹೋಗಬಹುದೆಂದು ಹೆದರಿದರು. ಈ ಶತಮಾನಾಂತ್ಯದಲ್ಲಿ ಬಂಗಾಳದಲ್ಲಿ 'ಆಧುನಿಕ' ಭಾವನೆಗಳನ್ನು ವಿರೋಧಿಸುವ ಪಕ್ಷವು ಪ್ರಬಲವಾಯಿತು. ಹಲವರು ಹಿಂದೂಧರ್ಮವು ಬೇಕಾದ ಎಲ್ಲಾ ಜ್ಞಾನವನ್ನೊಳಗೊಂಡಿದೆ ಎಂದೂ ಇದನ್ನು

ಬದಲಾಯಿಸುವ ಅಗತ್ಯವಿಲ್ಲವೆಂದೂ ವಾದಿಸಿದರು. ಕೆಲವರು ಪಾಶ್ಚಾತ್ಯ ವಿಜ್ಞಾನಸಂಶೋಧನೆಗಳನ್ನು ಆಗಲೇ ಭಾರತದ ಮಹರ್ಷಿಗಳು ಮಾಡಿದ್ದಾರೆಂದೂ ಆದುದರಿಂದ ಪಾಶ್ಚಾತ್ಯರ ಯಾವುದೇ ಭಾವನೆಗಳನ್ನಾಗಲಿ ಪದ್ಧತಿಗಳನ್ನಾಗಲಿ ನಕಲಿಮಾಡುವುದು ದೇಶದ್ರೋಹವೆಂದೂ ಕಟುವಾಗಿ ಟೀಕಿಸಿದರು. ಈ ಚಳವಳವೇ 'ನವಹಿಂದೂ' ಚಳವಳವಾಯಿತು. ಅನೇಕ ದೇಶಪ್ರೇಮಿಗಳು ಈ ಚಳವಳದಲ್ಲಿ ಭಾಗಿಗಳಾದರು. ಅವರಲ್ಲಿ ಕೆಲವರು ಬಂಕಿಮ್ ಚಂದ್ರ ಚಟರ್ಜಿಯವರಂಥಾ ಆದರ್ಶ ಗಣ್ಯವ್ಯಕ್ತಿಗಳಿದ್ದರು. ಇತರರು ಸಂಕುಚಿತ ಬುದ್ಧಿಯವರೂ ಸ್ವಾರ್ಥಿಗಳೂ ಸತ್ಯವನ್ನು ಅಲಕ್ಷಿಸಿದವರೂ ತಮ್ಮ ಪಕ್ಷವನ್ನು ಬಲಪಡಿಸುವುದಕ್ಕಾಗಿ ಅಧೀರ ಅಪ್ರಾಮಾಣಿಕ ವಿಧಾನಗಳನ್ನು ಅನುಸರಿಸಿದರು.

'ಸತ್ಯವನ್ನು ತ್ರಿಕರಣಪೂರ್ವಕವಾಗಿ ಪ್ರೀತಿಸು' ಎಂಬ ಪಾಠವನ್ನು ತನ್ನ ತಂದೆಯಿಂದ ಕಲಿತ ರವೀಂದ್ರನಾಥನು ಈ 'ನವಹಿಂದೂ' ಪಂಥದವರನ್ನು ಶಕ್ತಿಮೀರಿ ವಿರೋಧಿಸಿದನು. ಅವರ ಉಪದೇಶಗಳು ಅಸತ್ಯವೆಂದೂ ಇತರ ಮತಗಳ ತತ್ವಕ್ಕೆ ಅನ್ಯಾಯವನ್ನು ಮಾಡುವಂಥವುಗಳೆಂದೂ, ಹಿಂದೂ ಧರ್ಮಕ್ಕೂ ಭಾರತಕ್ಕೂ ಅಗೌರವವನ್ನು ತರುವಂಥವುಗಳೆಂದೂ, ಅವನು ದೃಢವಾಗಿ ನಂಬಿದ್ದನು.

ಒಮ್ಮೆ ಕಲ್ಕತ್ತದ ಬೀದಿಯಲ್ಲಿ ಇಂಗ್ಲೀಷು ಕ್ರೈಸ್ತ ಪಾದರಿಯೊಬ್ಬನು ಸಾಧುವೇಷದಲ್ಲಿ, ಬರಿಗಾಲಿನಲ್ಲಿ ನಡೆಯುತ್ತಾ ಉಪದೇಶಮಾಡುತಿದ್ದನು. 'ನವಹಿಂದೂ' ಪಂಥದವರ ನಿಕೃಷ್ಟ ಗುಂಪೊಂದು ಆತನ ಮೇಲೆ ಬಿದ್ದು, ಬಲವಾಗಿ ಹೊಡೆದು ನೋಯಿಸಿ ಮಾರ್ಗದ ಬದಿಯಲ್ಲಿ ಕೆಡವಿ ಹೊರಟು ಹೋಯಿತು. ಈ ಹೇಡಿತನದ ನಾಚಿಕೆಗೆಟ್ಟ ಆಕ್ರಮಣವನ್ನು ಕೇಳಿದ ರವೀಂದ್ರನಾಥನು ಕೋಪದಿಂದ ಕಿಡಿಕಿಡಿಯಾದನು. ತಕ್ಷಣವೇ ಕುಳಿತಲ್ಲಿಯೇ ಮೊನಚಾದ ವ್ಯಂಗ್ಯ ಬರೆಹದಲ್ಲಿ 'ಧರ್ಮಪ್ರಚಾರ'ವೆಂಬ ಕತೆಯನ್ನು ಪದ್ಯರೂಪವಾಗಿ ಬರೆದನು. ಸಾಧುವಿನ ವೇಷವನ್ನು ಗೌರವಿಸದ ಆ ನವಹಿಂದುಗಳನ್ನೂ, ಒಂಟಿಯಾಗಿ ನಿರಾಯುಧನಾಗಿದ್ದ ವ್ಯಕ್ತಿಯ ಮೇಲೆ ಬಿದ್ದು, ಪೋಲಿಸರಿಂದ ತಪ್ಪಿಸಿಕೊಳ್ಳಲು ಓಡಿಹೋದ 'ಮಹಾವೀರರನ್ನೂ' ಅಣಕವಾಡಿದನು. ನವಹಿಂದುಗಳಲ್ಲಿ ಕೆಲವರ ವರ್ತನೆಯು ಹಿಂದೂಧರ್ಮದ ಬದ್ಧವಿರುದ್ಧವರ್ತನೆಯೆಂದು ಅವನು ನಿರ್ಭಯನಾಗಿ ಸಾರಿದನು. ರವೀಂದ್ರನಾಥನು ನವಹಿಂದುಗಳ ಅತ್ಯಾಚಾರವನ್ನು ಕಟುವಾಗಿ ಟೀಕಿಸಿದ್ದರಿಂದ ದುರದೃಷ್ಟವಶಾತ್ ಬಂಕಿಮ್ ಚಂದ್ರರಿಗೂ ಅವನಿಗೂ ತುಸು ವೈಮನಸ್ಸುಂಟಾಯಿತು. ಯಾವ ಹಿರಿಯ ಬರೆಹಗಾರರನ್ನು ವಿಸ್ಮಯಗೊಂಡಿದ್ದನೋ ಅಂಥವರ ಬಹುಕಾಲದ ಮೈತ್ರಿಯನ್ನು

ಕಳೆದುಕೊಳ್ಳುವುದು ರವೀಂದ್ರನಾಥನಿಗೆ ಕಷ್ಟವಾಗಿ ತೋರಿತು; ಆದರೂ ತನ್ನ ನಿರ್ಧಾರವನ್ನು ಬದಲಾಯಿಸಲಿಲ್ಲ! ಸಂತೋಷದ ವಿಷಯವೆಂದರೆ ಬಂಕಿಮರು ಸ್ವರ್ಗಸ್ಥರಾಗುವ ಮೊದಲೇ ಅವರಿಬ್ಬರ ಹಿತಬಂಧುತ್ವವು ಮರಳಿ ಸಿದ್ಧಿಸಿತ್ತು.

ರವೀಂದ್ರನಾಥನು ಕಪಟ ಸಂಕುಚಿತ ದೇಶಪ್ರೇಮವನ್ನು ವಿರೋಧಿಸಿದರೂ ಉತ್ಸಾಹೀ ದೇಶಭಕ್ತರಲ್ಲಿ ಆತನೂ ಒಬ್ಬನಾಗಿದ್ದನು. ತನ್ನ ಜೀವಿತಕಾಲದಲ್ಲಿ ಭಾರತದ ನೈಜ ಮತ್ತು ಶಾಶ್ವತ ಹಿತಕ್ಕಾಗಿ ದುಡಿದನು. ಅವನು 'ವಿಶ್ವಕವಿ' ಯೆಂಬುದು ಸತ್ಯ; ಆದರೂ ಅವನು ನಿಸ್ಸಂದೇಹವಾಗಿ ಬಂಗಾಳದ ಆದಿಕವಿಯೂ ಅಗ್ರಕವಿಯೂ ಹೌದು. ಅವನ ಕವನಗಳಲ್ಲೆಲ್ಲ ಬಂಗಾಳದ ರಮಣೀಯ ದೃಶ್ಯಗಳು, ಮಳೆಗಳು, ಬೆಳೆಗಳು ಮತ್ತು ವಸಂತಕಾಲದ ಮಧುರ ಪರಿಮಳಗಳು ತುಂಬಿ ತುಳುಕಾಡುತ್ತವೆ. ನದಿಗಳು, ಕೆಯ್ವೊಲಗಳು, ಸುಂದರ ಬಿದಿರ ಮೆಳೆಗಳ ಮರೆಯಲ್ಲಿರುವ ಹಳ್ಳಿಗಳು, ಬಡತನದಿಂದ ನೊಂದ ಜನರು, ಅವರ ಹಾಡುಗಳು, ಅವರ ಅಜ್ಞಾತ ಪರಾಕ್ರಮ, ಅವರ ನೀರವ ದುರಂತಗಳು—ಎಲ್ಲವೂ ಆತನಲ್ಲಿ ಆಳವಾಗಿದ್ದ ಕೋಮಲ ಪ್ರೇಮವನ್ನು ಬಯಲಿಗೆಳೆದುವು. ಆತನ ಹುಟ್ಟೂರನ್ನು ಕುರಿತ ಈ ಹಾಡುಗಳಲ್ಲಿ ಅತ್ಯಂತ ಜನಪ್ರಿಯವಾದುದು 'ಬಂಗಾರದ ಬಂಗಾಳ'. ಈ ಕವನದಲ್ಲಿ ಶಬ್ದಗಳಿಂದ ನಿರೂಪಿಸಲಸಾಧ್ಯವಾದ ಬಂಗಾಳದ ಸೌಂದರ್ಯದ ಪ್ರೇಮಾರಾಧನೆ ತುಂಬಿದೆ. ಬಂಗಾಳದ ಜಾನಪದ ಗೀತಗಳಂತೆ ಇದರ ಪದಗಳು ಲಲಿತವಾಗಿಯೂ ಮಧುರವಾಗಿಯೂ ಇವೆ. ಬಂಗಾಳದಲ್ಲೆಲ್ಲ ಈ ಹಾಡನ್ನು ಹಾಡದವರಿಲ್ಲ. ಅವುಗಳಲ್ಲಿ ಎರಡರ ಅನುವಾದವನ್ನಿಲ್ಲಿ ಕೊಡಲಾಗಿದೆ:—

'ಬಂಗಾರದ ಬಂಗಾಳವೆ ಮುದ್ದಾಡುವೆ ನಿನ್ನ.
ನಿನ್ನಾಗಸ ಮಂದಾನಿಲವೆಂದೆಂದಿಗು ನನ್ನ—
ಆತ್ಮಕೆ ಬಾರಿಪುದೈ ಬಿಡದೀ ಮುರಲಿಯಗಾನ.
ಫಾಲ್ಗುಣದಲಿ, ನಿನ್ನಯ ಮಾಮರದುಪವನಗಳಲಿ
ಸಾರ್ದೊಡೆ ಮನಕಾದುದು ಘನ ಹರ್ಷ ಸುಗಂಧದಲಿ.
ಆಹಾ ನನಗೆ—
ವೈಶಾಖದಿ ಧಾನ್ಯಗಳಿಂ ತುಂಬಿದ ಹೊಲದಿಂದ
ಎಂತಹ ಮೋಹನ ನಸುನಗೆ ಸೂಸಿದೆ ಮುದದಿಂದ!

* * *

ತುರುಕರುಗಳು ಮೇಯುತ್ತಿಹ ನಿನ್ನಾ ಹೊಲಗಳನು
ಹರಿಗೋಲಲಿ ನೆರೆ ಸೇರುತುಮಾಚೆಯ ದಂಡೆಯನು
ದಿನವೆಲ್ಲಾ ನೆರಳಿಂ ತಂಪಾಗಿಹ ಹಳ್ಳಿಯನು

ಅಲ್ಲಿಯೆ ಮೆಲ್ಲುಲಿಯಿಂ ಹಾಡುವ ಖಗ ಗೀತವನು
ಧಾನ್ಯಗಳಿಂ ತುಂಬಿರುವಾ ನಿನ್ನಂಗಣವನ್ನು
ಸಾರುತಲಿ ನಲಿಯುತಲಿ ಕಳೆವೆನು ದಿನಗಳನು!
ಆಹಾ ನನಗೆ—
ಅವರೆಲ್ಲಾ ಸೋದರರು, ರೈತರು ಮೇಣ್ ಕುರುಬರ್.

ರವೀಂದ್ರನಾಥನು ಬಂಗಾಳದ ಪ್ರಶಂಸಾತ್ಮಕ ಕವನಗಳನ್ನು ರಚಿಸುವುದು ಇಲ್ಲವೇ ಹಾಡುವುದು—ಇಷ್ಟರಿಂದಲೇ ತೃಪ್ತನಾಗಲಿಲ್ಲ. ಆತನ ದೃಷ್ಟಿಯಲ್ಲಿ ಪ್ರೀತಿಸುವುದೆಂದರೆ ಸೇವೆ ಮಾಡುವುದು. ಯಾವ ಕವಿಯೂ ಆತನಷ್ಟು, ವಿವಿಧ ಪ್ರಕಾರಗಳಿಂದ ದೇಶಸೇವೆಯನ್ನು ಸಲ್ಲಿಸಲಿಲ್ಲ. ನಾವು ಹೇಳುತ್ತಿರುವ ಈ ಹದಿನೈದು ವರ್ಷಗಳಲ್ಲಿ ಎರಡು ಮಹತ್ಕಾರ್ಯಗಳನ್ನು—ಬಂಗಾಳಿಯ ಭಾಷೆ ಮತ್ತು ಬಂಗಾಳಿಯ ಹಳ್ಳಿ—ಸಿದ್ಧಿಸಲು ಟೊಂಕ ಕಟ್ಟಿದನು. ಇವೆರಡರ ಅಭಿವೃದ್ಧಿಗಾಗಿ ತನ್ನ ಉಳಿದ ಜೀವಮಾನವನ್ನು ಸವೆಸಿದನು.

ಕಳೆದ ಶತಮಾನಾಂತ್ಯದಲ್ಲಿ ವಿದ್ಯಾವಂತರಾದ ಬಂಗಾಳಿಗಳು ತಮ್ಮ ಮಾತೃಭಾಷೆಯನ್ನು ಕಡೆಗಣಿಸುವುದು ಸರ್ವಸಾಮಾನ್ಯವಾಗಿತ್ತು. ಅವರು ಎಲ್ಲಾ ಸಾರ್ವಜನಿಕ ಸಭೆಗಳಲ್ಲಿಯೂ ತಮ್ಮ ಖಾಸಗಿ ಜೀವನದಲ್ಲಿಯೂ ಇಂಗ್ಲೀಷನ್ನೇ ಬಳಸುತಿದ್ದರು. ಶಾಲೆಗಳಲ್ಲಿ ಎಲ್ಲಾ ವಿಷಯಗಳನ್ನು ಇಂಗ್ಲೀಷಿನಲ್ಲೇ ಕಲಿಸುತಿದ್ದರು. ಮಾತೃಭಾಷೆಯನ್ನು ಅಲಕ್ಷಿಸುವುದು ಸಂಪ್ರದಾಯವಾಗಿ ಬಿಟ್ಟಿತ್ತು. ಜನರು ಸರಿಯಾಗಿ ತಾಯ್ನುಡಿಯಲ್ಲಿ ಮಾತಾಡುವುದಕ್ಕೂ ನಾಚುತಿದ್ದರು. ಅವರ ನಾಚಿಕೆಗೇಡಿತನವನ್ನು ನೋಡಿ ರವೀಂದ್ರನಾಥನು ನಾಚಿಕೊಂಡನು. ಮೊತ್ತಮೊದಲು ಶಾಲೆಗಳಲ್ಲಿ ಮಕ್ಕಳಿಗೆ ಮಾತೃಭಾಷೆಯಲ್ಲೇ ಶಿಕ್ಷಣವು ಸಾಗಬೇಕೆಂದು ಪ್ರತಿಪಾದಿಸಿದನು. ಬಂಗಾಳೀ ಮಾಧ್ಯಮದಲ್ಲೇ ತನ್ನ ಶಿಕ್ಷಣವು ಆರಂಭವಾದುದನ್ನೂ ಅನಂತರ ಇಂಗ್ಲೀಷನ್ನು ಕಲಿತುದನ್ನೂ ಸ್ಮರಿಸಿಕೊಂಡನು. ಇದೇ ಸರಿಯಾದ ಶಿಕ್ಷಣ ಪದ್ಧತಿ ಎಂಬುದನ್ನು ದೃಢವಾಗಿ ನಂಬಿದ್ದನು. ತನ್ನ ಸಂಗೀತಪಾಠಗಳಲ್ಲಿ ತನಗೆ ಅರ್ಥವಾಗದ ಹಿಂದುಸ್ಥಾನೀ ಸಂಗೀತದ ಹಾಡುಗಳನ್ನು ಕಲಿಸದೆ, ಬಂಗಾಳಿಯ ಜಾನಪದ ಗೀತಗಳನ್ನು ಉಪಾಧ್ಯಾಯರು ಕಲಿಸಿದಾಗ ತನಗುಂಟಾಗಿದ್ದ ಅಪರಿಮಿತಾನಂದವನ್ನೂ ನೆನೆದನು. ತನ್ನ ಎಲ್ಲಾ ಬರೆಹಗಳಲ್ಲಿಯೂ ಭಾಷಣಗಳಲ್ಲಿಯೂ ಬಂಗಾಳಿಯ ಪರವಾಗಿ ಅವಿಶ್ರಾಂತವಾಗಿ ವಾದಿಸಿದನು. ತನ್ನ ಬಾಲ್ಯದ ದಿನಗಳಲ್ಲಿ ತಾನು ಮೆಚ್ಚಿದ್ದ ಹಾಡುಗಳನ್ನೂ ಶಿಶುಗೀತೆಗಳನ್ನೂ ಇತರ ಮಕ್ಕಳು ಓದಿ ಆನಂದ ಪಡಲೆಂದು ಸಂಗ್ರಹಿಸಿದನು.

ಆ ಸಮಯದಲ್ಲಿ 'ಬಂಗಾಳದ ಪ್ರಾಂತೀಯ ಮಹಾ ಸಭೆ'ಯ ವಾರ್ಷಿಕ ಸಭೆ ನಡೆಯುತಿತ್ತು. ರವೀಂದ್ರನಾಥನೂ ಈ ಸಭೆಗೆ ಹೋಗುತಿದ್ದನು. 1897 ರಲ್ಲಿ, ಈ ಸಭೆಯ ಸದಸ್ಯರೆಲ್ಲ ಬಂಗಾಳಿಗಳೇ ಆದುದರಿಂದ ಬಂಗಾಳಿಯಲ್ಲಿಯೇ ಇದರ ಕಾರ್ಯಕ್ರಮಗಳು ಜರಗಬೇಕೆಂದು ರವೀಂದ್ರನಾಥನು ಮುಂದಾಳುಗಳನ್ನು ಸಮಾಧಾನಪಡಿಸಲು ಯತ್ನಿಸಿದನು; ಆದರೆ ಫಲಕಾರಿಯಾಗಲಿಲ್ಲ. ಇಂಗ್ಲೀಷಿನಲ್ಲೇ ವ್ಯವಹರಿಸಿ ಅಭ್ಯಾಸವಾಗಿದ್ದುದರಿಂದ ಇದನ್ನು ಬದಲಾಯಿಸಲು ಅವರು ಒಪ್ಪಲಿಲ್ಲ. ರವೀಂದ್ರನಾಥನ ಪಕ್ಷವು ಅಲ್ಪಸಂಖ್ಯಾಕರದಾಗಿತ್ತು; ಆದರೂ ತನ್ನ ಗುರಿಯನ್ನು ಸಾಧಿಸುವುದಕ್ಕಾಗಿ ಹೋರಾಟ ನಡೆಸುತ್ತಲೇ ಇದ್ದನು. ಎರಡು ವರ್ಷಗಳ ಮೇಲೆ ಆತನು ಮಹಾಸಭೆಯಲ್ಲಿ ಅಧ್ಯಕ್ಷರು ಇಂಗ್ಲೀಷಿನಲ್ಲಿ ಮಾಡಿದ ಭಾಷಣವನ್ನು ಬಂಗಾಳಿಗೆ ಅನುವಾದ ಮಾಡಿದನು.

ರವೀಂದ್ರನಾಥನು ವರ್ಷಗಟ್ಟಲೆ ಬಂಗಾಳೀಭಾಷೆಗಾಗಿ ಹೋರಾಡಿ ಕೊನೆಯಲ್ಲಿ ಜಯಶಾಲಿಯಾದನು. ಈಗ ಹೈಸ್ಕೂಲು ವಿದ್ಯಾಭ್ಯಾಸ ಪೂರ್ಣವಾಗುವ ತನಕ ಬಂಗಾಳಿಯಲ್ಲೇ ಮಕ್ಕಳಿಗೆ ಶಿಕ್ಷಣವು ಕೊಡಲಾಗುತ್ತಿದೆ. ಮಕ್ಕಳು ಇಂಗ್ಲೀಷನ್ನು ಎರಡನೆಯ ಭಾಷೆಯನ್ನಾಗಿ ಕಲಿಯುತ್ತಾರೆ. ಸರ್ವಸಾಧಾರಣವಾಗಿ, ಎಲ್ಲಾ ಸಾರ್ವಜನಿಕ ಸಭೆಗಳಲ್ಲಿ ಬಂಗಾಳಿಯನ್ನೇ ಆಡುತ್ತಾರೆ. ಕಲ್ಕತ್ತದ ವಿಶ್ವವಿದ್ಯಾಲಯದಲ್ಲಿ ಯುವಕ ವಿದ್ಯಾರ್ಥಿಗಳಿಗೆ ಇನ್ನೂ ಇಂಗ್ಲೀಷಿನಲ್ಲೇ ಶಿಕ್ಷಣವು ಕೊಡಲಾಗುತ್ತಿದೆ. ಆದರೆ ಬಂಗಾಳಿಯು ಪ್ರಮುಖ ಸ್ಥಾನವನ್ನು ಪಡೆಯುತ್ತಲಿದೆ. ವಿಶ್ವವಿದ್ಯಾಲಯದ ಪದವೀದಾನ ಸಮಾರಂಭ ಭಾಷಣವನ್ನು ಕೆಲವೇ ವರ್ಷಗಳ ಹಿಂದಿನವರೆಗೂ ಯಾವಾಗಲೂ ಇಂಗ್ಲೀಷಿನಲ್ಲೇ ಕೊಡುತಿದ್ದರು. ಒಂದು ಸಂದರ್ಭದಲ್ಲಿ ಈ ಸಮಾರಂಭಕ್ಕೆ ರವೀಂದ್ರನಾಥನನ್ನು ಭಾಷಣಮಾಡುವಂತೆ ವಿಶ್ವವಿದ್ಯಾಲಯದವರು ಕೇಳಿಕೊಂಡರು. ಮೊದಲ ಬಾರಿಗೆ ಭಾಷಣವು ಬಂಗಾಳಿಯಲ್ಲಿ ಕೊಡಲಾಯಿತು! ಈಗ ಬಂಗಾಳದ ಜನತೆ ತಾಯ್ನುಡಿಯಲ್ಲಿ ಮಾತಾಡಲು ನಾಚುವುದಿಲ್ಲ; ಹೆಮ್ಮೆ ಪಡುತ್ತಾರೆ. ಚೆನ್ನಾಗಿ ಬರೆಯಲೂ ಮಾತನಾಡಲೂ ಕಲಿಯುವುದೆಂದರೆ ಅವರಿಗೆ ಬಹಳ ಅಭಿಮಾನ. ಎಲ್ಲಕ್ಕಿಂತಲೂ ವಿಶೇಷವೆಂದರೆ, ರವೀಂದ್ರನಾಥನ ಈ ಭಾವನೆಯ ಪ್ರಭಾವವು ಅವನ ಪ್ರಾಂತದಲ್ಲಷ್ಟೇ ನಿಲ್ಲಲಿಲ್ಲ. ಬಂಗಾಳದ ಮಾದರಿಯನ್ನನುಕರಿಸಿ ಭಾರತದ ಇತರ ಪ್ರಾಂತದವರೂ ತಂತಮ್ಮ ತಾಯ್ನುಡಿಯನ್ನು ಗೌರವಿಸತೊಡಗಿದರು. ಶಿಕ್ಷಣದಲ್ಲಿಯೂ ಜೀವನದಲ್ಲಿಯೂ ಮಾತೃಭಾಷೆಗೆ ಸಲ್ಲತಕ್ಕ ಗೌರವವನ್ನು ಸಲ್ಲಿಸಿದರು. ಪ್ರಜೆಗಳ ಸೇವೆಗಾಗಿ ಮಹಾತ್ಮಾಗಾಂಧಿಯವರು

ಕೈಕೊಂಡ ಕಾರ್ಯಕ್ರಮಗಳ ಹದಿಮೂರು ಪ್ರಧಾನ ವಿಷಯಗಳಲ್ಲಿ 'ಮಾತೃ ಭಾಷಾಪ್ರೇಮವೂ' ಒಂದು.

ರವೀಂದ್ರನಾಥನು ಬಂಗಾಳಿಗಾಗಿ ದುಡಿಯುತಿದ್ದಾಗ ಇಂಗ್ಲೀಷು ಕಲಿತವರು ಮಾತ್ರವಲ್ಲದೆ, ಭಾಷೆಯನ್ನು ಹೇಗೆ ಬಳಸಬೇಕೆಂಬುದನ್ನು ನಿರ್ಧರಿಸಲು ತಾವೇ ತಜ್ಞರೆಂಬ ಭಾವನೆಯುಳ್ಳ ಪಂಡಿತರೂ ಪ್ರಾಚೀನ ವಿದ್ವಾಂಸರೂ ವಿರೋಧಿಸಿದರು. ರವೀಂದ್ರನಾಥನು ಬರೆಯುವುದಕ್ಕೆ ಆರಂಭಮಾಡಿದಾಗ ಜನರಾಡುತಿದ್ದ ಬಂಗಾಳಿಗೂ ಗ್ರಂಥಸ್ಥಬಂಗಾಳಿಗೂ ಅಜಗಜಾಂತರವಿತ್ತು. ಈ ವ್ಯತ್ಯಾಸವು ಇತರ ಭಾರತೀಯ ಭಾಷೆಗಳಲ್ಲಿಯೂ ಇತ್ತು. ಮಾತಾಡುವ ಬಂಗಾಳಿಯಲ್ಲಿ ಕ್ರಿಯಾಪದಗಳೂ ವ್ಯಾಕರಣ ಮರ್ಯಾದೆಗಳೂ ಶಬ್ದರೂಪಗಳೂ ವ್ಯತ್ಯಾಸಗೊಂಡಿದ್ದುವು. ಆದರೆ ಈ ಗ್ರಾಮ್ಯರೂಪಗಳನ್ನು ಸಾರ್ವಜನಿಕ ಭಾಷಣಗಳಲ್ಲಾಗಲಿ, ಸಾಹಿತ್ಯದಲ್ಲಾಗಲಿ, ಉಪಯೋಗಿಸುವುದು ಕೇವಲ 'ಧಾರ್ಷ್ಟ್ಯ'ವೆಂದೂ 'ಅಗೌರವ'ವೆಂದೂ ವಿರೋಧ ಪಕ್ಷದವರು ಭಾವಿಸಿದರು. 'ಬರೆಹಗಾರರೂ ಭಾಷಣಗಾರರೂ ವಿಚಾರಶೀಲರೂ ಸಮಾಜದಲ್ಲಿ ತಮ್ಮ ಯೋಗ್ಯತೆಗೆ ತಕ್ಕ ಸ್ಥಾನವನ್ನು ಪಡೆಯಬೇಕಾದರೆ ಜನಸಾಮಾನ್ಯರ ಭಾಷೆಯಲ್ಲಿ ಅವರಿಗೆ ಅರ್ಥವಾಗುವ ರೀತಿಯಲ್ಲಿ ಬರೆಯಬೇಕು, ಭಾಷಣಮಾಡಬೇಕು' ಎಂಬುದು ರವೀಂದ್ರನಾಥನ ಆಶಯವಾಗಿತ್ತು. ತಾವು ಆಡುವುದನ್ನು ಜನರು ಶ್ರದ್ಧೆಯಿಂದ ಕೇಳಬೇಕೆಂದಿದ್ದರೆ, ಸಹಜವಾಗಿ ಅವರಾಡುವ ಭಾಷೆಯಲ್ಲೇ ಮಾತನಾಡಬೇಕಲ್ಲದೆ ಗ್ರಂಥಸ್ಥ ಭಾಷೆಯಿಂದಲ್ಲ.

ನಿತ್ಯವ್ಯವಹಾರದಲ್ಲಿರುವ ಭಾಷೆಯು ಜೀವಂತ ಹಾಗೂ ಶಕ್ತಿಯುಕ್ತ ಭಾಷೆಯೆಂದೂ, ಕೃತಕ ಗ್ರಂಥಸ್ಥಭಾಷೆಯು ನಿರ್ಜೀವವಾದುದೆಂದೂ ರವೀಂದ್ರನಾಥನು ಮನಗಂಡನು. ಅವನು ಜನರ ಆಡುಮಾತಿನಲ್ಲೇ ಕವನಗಳನ್ನೂ ಗಂಭೀರ ಲೇಖನಗಳನ್ನೂ ಬರೆದು ಪ್ರಯೋಗನಡೆಸಿದನು. ಪಂಡಿತರು ಈ ಪ್ರಯೋಗಗಳನ್ನು ಮೆಚ್ಚಲಿಲ್ಲ. ಸಾಹಿತ್ಯವನ್ನು ಜನಸಾಮಾನ್ಯರು ಪಂಡಿತರ ಸಹಾಯವಿಲ್ಲದೆ ಸುಲಭವಾಗಿ ಅರ್ಥಮಾಡಿಕೊಳ್ಳಬಲ್ಲರೆಂದರೆ ಅವರ ಘನ ಪಾಂಡಿತ್ಯದಿಂದೇನು ಪ್ರಯೋಜನ! ಅವರು ತಮ್ಮಿಂದ ಸಾಧ್ಯವಿದ್ದಷ್ಟೂ ರವೀಂದ್ರನಾಥನನ್ನು ವಿರೋಧಿಸಿದರು; ಆದರೆ ಅವನು ತನ್ನ ಪ್ರಯೋಗಗಳನ್ನು ಬಿಡದೆ ನಡೆಸುತ್ತಾ ಹೋಗಿ, ಕೊನೆಯಲ್ಲಿ ಸಂಪೂರ್ಣ ವಿಜಯಿಯಾದನು. 'ಬಂಗಾರದ ಬಂಗಾಳ'ದಂತಹ ಪಂಡಿತ ಪಾಮರರಂಜಕವಾದ ಹಾಡುಗಳನ್ನು ಬರೆದನು. ನಿತ್ಯ ವ್ಯವಹಾರದಲ್ಲಿರುವ ಹಾಸ್ಯಮಯ ಸಹಜ ಪದಗಳನ್ನು ಉಪಯೋಗಿಸಿ ಸತ್ವಯುಕ್ತ ಗದ್ಯಲೇಖನಗಳನ್ನೂ ಬರೆದನು. ಅವನು ಈ ಪ್ರಾಯೋಗಿಕ

ಭಾಷೆಯಿಂದಲೇ ಸತ್ವಪೂರ್ಣ ಮಹಾಕಾವ್ಯಗಳನ್ನು ರಚಿಸಿದನು. ಅರ್ಥವಾಗದ ಪಂಡಿತರ ಶೈಲಿಯಲ್ಲಿ ಬರೆಯುತ್ತಿದ್ದರೆ ಅವು ನಿಜವಾಗಿಯೂ ನೀರಸವಾಗುತಿದ್ದುವು. ಬಂಗಾಳದ ಆಧುನಿಕ ಬರೆಹಗಾರರೆಲ್ಲ ರವೀಂದ್ರನಾಥನ ದಾರಿಯನ್ನೇ ಅನುಸರಿಸಿದರು. ನವೀನ ಬಂಗಾಳೀ ಕವನಗಳು ಮಕ್ಕಳಿಗೆ ಬೇಸರವನ್ನುಂಟು ಮಾಡದೆ, ಸುಲಭವಾಗಿ ಅರ್ಥಮಾಡಿಕೊಳ್ಳುವಂತಿವೆ. ಮಕ್ಕಳ ಹಾಡುಗಳು ಮತ್ತು ಕವನಗಳುಳ್ಳ ಎಷ್ಟೋ ಪುಸ್ತಕಗಳನ್ನು ಸಣ್ಣವರೂ ಓದಿ ಆನಂದಿಸಬಹುದು. ಈ ಅದ್ಭುತ ಬದಲಾವಣೆಗೆ ರವೀಂದ್ರನಾಥನೇ ಮೂಲಕಾರಣನಾದನು.

ರವೀಂದ್ರನಾಥನು ಬಂಗಾಳದ ಹಳ್ಳಿಗಳ ಸಮಸ್ಯೆಯ ಕುರಿತು 1890 ರಿಂದಲೇ ಯೋಚಿಸುತಿದ್ದನು. ಆ ವರ್ಷವೇ ತನ್ನ ಕುಟುಂಬದ ಆಸ್ತಿಯ ಜವಾಬ್ದಾರಿಯನ್ನು ವಹಿಸಿದ್ದನು. ಠಾಗೋರು ಕುಟುಂಬಕ್ಕೆ ಒರಿಸ್ಸಾ ಪ್ರಾಂತದಲ್ಲಿ ಪದ್ಮಾನದಿಯ ಹತ್ತಿರದ ಶಿಲೇದದಲ್ಲಿಯೂ ಉತ್ತರ ಬಂಗಾಳದ ಪೋಟಸರದಲ್ಲಿಯೂ ಆಸ್ತಿಯಿತ್ತು. ಕುಟುಂಬದ ಉತ್ಪತ್ತಿಯು ಈ ಭೂಮಿಗಳಿಂದ ಬರುತಿತ್ತು. ರವೀಂದ್ರನಾಥನು ಇನ್ನೂ ಮೂವತ್ತು ದಾಟಿರಲಿಲ್ಲ. ಅವನಿಗೆ ಹಳ್ಳಿಯ ಜನಜೀವನದ ಅನುಭವವಿದ್ದಿಲ್ಲ; ಕೃಷಿಯ ಮಾಹಿತಿಯಂತೂ ಮೊದಲೇ ಇರಲಿಲ್ಲ. ತನ್ನ ಹೊಸ ಕೆಲಸವನ್ನು ಸರಿಯಾಗಿ ನಿರ್ವಹಿಸಬಲ್ಲೆನೆಂಬ ಆತ್ಮ ವಿಶ್ವಾಸವೂ ಆತನಿಗಿದ್ದಿಲ್ಲ.

ತಾನು ಚಿಕ್ಕವನಿದ್ದಾಗ ಹಿರಿಯಣ್ಣನೊಂದಿಗೆ ತಂಗಿದ್ದ ಶಿಲೇದಕ್ಕೆ ಹೋಗಿ ವಾಸಿಸತೊಡಗಿದನು. ಹಿಂದಿನ ದಿನಗಳಲ್ಲಿ, ಸ್ವೇಚ್ಛೆಯಿಂದ ವಿಹರಿಸುತ್ತಾ ಅಲ್ಲಿನ ಪ್ರಶಾಂತ ರಮಣೀಯ ವಾತಾವರಣವನ್ನು ನೆಚ್ಚಿದ್ದನು. ಆದರೆ ಈಗ ಆಸ್ತಿಯ ಜವಾಬ್ದಾರಿಕೆಯು ಆತನನ್ನು ಆಸಕ್ತಿಯಿಂದ ದುಡಿಯುವಂತೆ ಮಾಡಿತು. ಮೊದಲ ಬಾರಿಗೆ ಬಂಗಾಳದ ರೈತರೊಂದಿಗೆ ಸಮೀಪ ಸಂಪರ್ಕವನ್ನು ಬೆಳೆಸಿದನು; ಸಮಾಜಪದ್ಧತಿಗಳಲ್ಲುಂಟಾಗುತಿದ್ದ ಬದಲಾವಣೆಯನ್ನು, ಮುಖ್ಯವಾಗಿ ಶ್ರೀಮಂತರು ಹಳ್ಳಿಗಳನ್ನು ಬಿಟ್ಟು ನಗರಜೀವನವನ್ನವಲಂಬಿಸಲು ತೊಡಗಿದ್ದುದರಿಂದ ಬರುವ ಕಷ್ಟಗಳನ್ನು ಅರಿತನು. ತನ್ನ ಕೆಲಸಗಳಿಗಾಗಿ ದೋಣಿಯಲ್ಲಿ ಕುಳಿತು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಂಚರಿಸುತ್ತಾ ರೈತರ ಗೆಳೆತನವನ್ನು ಮಾಡಿದನು. ಅವರ ಅವಶ್ಯಕತೆಗಳನ್ನು ಮನಗಂಡನು; ಮತ್ತು ಹಳ್ಳಿಯ ಸಂಘಗಳ ಅವನತಿಯ ಕಾರಣವನ್ನೂ ತಿಳಿದನು.

ಹಿಂದಿನ ಕಾಲದಲ್ಲಿ ರೈತರ ಸಾಮಾನ್ಯ ಅವಶ್ಯಕತೆಗಳನ್ನು ಶ್ರೀಮಂತ ಭೂಮಾಲಿಕರು ನೋಡಿಕೊಳ್ಳುತಿದ್ದರು. ಅವರೇ ರೈತರ ಮುಂದಾಳುಗಳಾ



ರವೀಂದ್ರನೂ ಕುಮಾರಿ ಬೇಲಳೂ

ಗಿದ್ದರು. ಅವರಲ್ಲಿ ಪ್ರತಿಯೊಬ್ಬನೂ ತನ್ನ ಹಳ್ಳಿಯ ಯೋಗಕ್ಷೇಮದ ಕುರಿತು ವಿಶೇಷ ಆಸಕ್ತಿವಹಿಸುತಿದ್ದನು. ಅವರು ಮಾರ್ಗಗಳನ್ನು ಮಾಡಿಸುತಿದ್ದರು; ದೇವಾಲಯಗಳನ್ನೂ ಸಾರ್ವಜನಿಕ ಕಟ್ಟಡಗಳನ್ನೂ ಜೀರ್ಣೋದ್ಧಾರಮಾಡಿಸುತಿದ್ದರು; ಕೆರೆಗಳನ್ನು ಶುಚಿಗೊಳಿಸಿ ಸುತ್ತುಮುತ್ತಲಿನ ಸ್ಥಳಗಳನ್ನು ಚೊಕ್ಕಟವಾಗಿರಿಸುತಿದ್ದರು. ಹಳ್ಳಿಗಳಲ್ಲಿ ವಾಸಿಸುವ ಬಡಗಿಗಳು, ಅಕ್ಕಸಾಲಿಗರು, ನೇಕಾರರು ಮತ್ತು ಎಲ್ಲಾ ಬಗೆಯ ಕಾರ್ಮಿಕರು ಶ್ರೀಮಂತರು ಬಡವರೆನ್ನದೆ ಅವರ ಸೇವೆಮಾಡುತಿದ್ದರು. ಹಳ್ಳಿಗರಿಗೆ ಬೇಕಾದ ಅಶನವಸನ ವಸತಿಗಳನ್ನೂ ವಿದ್ಯೆಯನ್ನೂ ಮನೋರಂಜಕ ಕಾರ್ಯಕ್ರಮಗಳನ್ನೂ ತಾವೇ ಮಾಡಿಸುತಿದ್ದರು. ಭೂಮಾಲಿಕರು ಹಳ್ಳಿಗಳನ್ನು ಬಿಟ್ಟು ಹೊಸತಾಗಿ ತಲೆಯೆತ್ತುತಿದ್ದ ನಗರಗಳಿಗೆ ಹೋಗಿ ವಾಸಿಸಲು ತೊಡಗಿದಾಗ ಹಳ್ಳಿಯ ಜೀವನವೇ ಬದಲಾಯಿತು. ಅವರು ಹಳ್ಳಿಗಳನ್ನು ಬಿಟ್ಟಂದಿನಿಂದ ಹಳ್ಳಿಗಳ ಆರೋಗ್ಯ, ಶುಚಿತ್ವ, ಶಿಸ್ತು ಮುಂತಾದುವುಗಳನ್ನು ಅಲಕ್ಷಿಸುತಿದ್ದರು. ತಮ್ಮ ಭೂಮಿಯ ಉತ್ಪತ್ತಿಯನ್ನು ಸಂಗ್ರಹಮಾಡುವುದರಲ್ಲಿ ಮಾತ್ರ ಶ್ರದ್ಧೆವಹಿಸುತಿದ್ದರು. ಹಳ್ಳಿಯ ಕಾರ್ಮಿಕರಿಗೆ ಉದ್ಯೋಗವನ್ನು ಕಲ್ಪಿಸದೆ, ತಮ್ಮ ಅವಶ್ಯಕತೆಗಳನ್ನು ನಗರಗಳಿಂದಲೇ ಪೂರೈಸಿಕೊಳ್ಳುತಿದ್ದರು. ಇದರಿಂದಾಗಿ ಹಳ್ಳಿಗಳಲ್ಲಿ ಅನಾರೋಗ್ಯವು ಹೆಚ್ಚಾಗಿ ಅವುಗಳ ಅವನತಿಯಾಗತೊಡಗಿತು. ಕಾರ್ಮಿಕರಲ್ಲಿ ಬಹುಮಂದಿ ಉತ್ತಮ ಜೀವನವನ್ನು ಸಾಗಿಸಲು ಪಟ್ಟಣಗಳನ್ನು ಸೇರಿಕೊಂಡರು. ಹಳ್ಳಿಗಳಲ್ಲಿ ಉಳಿದವರೆಂದರೆ ಬಡ ಬೇಸಾಯಗಾರರು ಮಾತ್ರ!

ಹಳ್ಳಿಗರ ಸುಖಜೀವನಕ್ಕೆ ಸಂಬಂಧಿಸಿದ ಹಲವು ವಸ್ತುಗಳನ್ನು ಅವರೇ ತಯಾರಿಸಿಕೊಳ್ಳಬಲ್ಲರೆಂಬುದನ್ನು ರವೀಂದ್ರನಾಥನು ಚೆನ್ನಾಗಿ ತಿಳಿದಿದ್ದನು. ಅವರಿಗೆ ನಿಧಿಯ ಅಗತ್ಯವಿಲ್ಲ, ಬೇಕಾದುದು ಒಟ್ಟಾಗಿ ಕೆಲಸಮಾಡುವ ಶಕ್ತಿ ಮತ್ತು ಹಿತಚಿಂತನೆ ಮಾತ್ರ. ಹೊಲಗದ್ದೆಗಳಲ್ಲಿ ಸಾಕಷ್ಟು ಕೆಲಸವಿಲ್ಲದ ಕಾಲಗಳಲ್ಲಿ ಅವರೇ ಮಾರ್ಗಗಳನ್ನು ಸರಿಪಡಿಸಬಲ್ಲರು, ಕೆರೆಗಳನ್ನು ಶುಚಿಗೊಳಿಸಬಲ್ಲರು ಮತ್ತು ಹೊಸ ಬಾವಿಗಳನ್ನು ತೋಡಬಲ್ಲರು. ಆದರೆ ರವೀಂದ್ರನಾಥನು ತನ್ನ ಈ ಯೋಚನೆಗಳನ್ನು ಹಳ್ಳಿಗರಿಗೆ ವಿವರಿಸಿದಾಗ ಅವರು ಅದನ್ನು ನಿರಾಕರಿಸಿದರು. ತಮ್ಮ ಹುಲ್ಲಿನ ಮನೆಗಳಿಗೆ ಬೆಂಕಿಬಿದ್ದು ಸುಟ್ಟು ಹೋಗುತಿದ್ದರೂ ಬೆಂಕಿಯನ್ನು ನಂದಿಸಲು ಅನ್ಯೋನ್ಯ ಸಹಕರಿಸುತಿದ್ದಿಲ್ಲ! ಇದಕ್ಕೇನು ಕಾರಣವಿದ್ದಿರಬಹುದು? ರವೀಂದ್ರನಾಥನು ಎರಡು ಕಾರಣಗಳನ್ನು ತರ್ಕಿಸಿದನು. ಮೊದಲನೆಯದಾಗಿ ತಮಗೆ ಬೇಕಾಗಿದ್ದುದನ್ನು ಭೂಮಾಲಿಕರೋ ಇಲ್ಲವೇ ಅದ್ಭುತ ದೂರದ 'ಸರಕಾರವೋ' ಮಾಡಿಸುತಿದ್ದುದು

ಅಭ್ಯಾಸವಾಗಿಬಿಟ್ಟಿತ್ತು; ಸ್ವತಃ ಮಾಡುವ ಚೈತನ್ಯವನ್ನು ಕಳಕೊಂಡಿದ್ದರು. ಇತರರು ಹೇಳಿಕೊಟ್ಟಂತೆ ಮಾಡುವುದು ರೂಢಿಯಾಗಿದ್ದ ಅವರು ಈಗ ಮಾರ್ಗದರ್ಶಕರಿಲ್ಲದೆ ಅಸಹಾಯಕರಾಗಿದ್ದರು. ಹಳೆಯ ಭೂಮಾಲಿಕ ಪದ್ಧತಿಯಲ್ಲಿ ಹಲವು ಉತ್ತಮ ಗುಣಗಳಿದ್ದುವು. ಆದರೆ ಇದೊಂದು ಮಾತ್ರ ದುಷ್ಪರಿಣಾಮವಾಗಿತ್ತು. ಎರಡನೆಯದಾಗಿ—ಹಳ್ಳಿಗರಿಗೆ 'ಕರ್ಮ' ಅಥವಾ 'ವಿಧಿ'ಯಲ್ಲಿದ್ದ ಬಲವಾದ ನಂಬಿಕೆ. ಸಂಕಟ ಬಂದಾಗ ಅವರು 'ಎಲ್ಲವೂ ದೈವೇಚ್ಛೆ' ಎಂದೋ 'ಪೂರ್ವಜನ್ಮದ ಪಾಪದ ಫಲ'ವೆಂದೋ ಅಡಿಕೊಳ್ಳುತ್ತಿದ್ದರು; ತಮ್ಮ ಪ್ರಯತ್ನಗಳಿಂದ ಎಂತಹ ಕಷ್ಟಗಳನ್ನಾಗಲಿ, ರೋಗಗಳನ್ನಾಗಲಿ ನಿವಾರಿಸ ಬಹುದೆಂಬುದನ್ನು ಎಷ್ಟಕ್ಕೂ ನಂಬುತ್ತಿದ್ದಿಲ್ಲ. ಒಟ್ಟಿನಲ್ಲಿ, ಹಳ್ಳಿಗರಾದ ಮುಸ್ಲಿಮರು ರವೀಂದ್ರನ ಮಾತನ್ನು ಕೇಳಲು ಸಿದ್ಧರಾಗಿ ಮುಂದೆ ಬಂದಂತೆ ಹಿಂದುಗಳು ಬರಲಿಲ್ಲ. ಕಾರಣವೇನೆಂದರೆ ಮುಸ್ಲಿಮರು ಮಾರ್ಗದರ್ಶಕನನ್ನು ಹಾರೈಸದೆ ತಾವೇ ತಮ್ಮ ಕೆಲಸಗಳನ್ನು ಮಾಡುತ್ತಿದ್ದರು.

ಹಳ್ಳಿಯ ಸುಧಾರಣೆ ಮಾಡಲು ಹೊರಟ ರವೀಂದ್ರನಾಥನು ತನ್ನ ಉತ್ಸಾಹಕ್ಕೆ ಭಂಗವುಂಟಾಯಿತೆಂದು ಧೃತಿಗೆಡಲಿಲ್ಲ. ಈ ಪ್ರಶ್ನೆಯು ತಾನು ಮೊದಲು ಊಹಿಸಿದುದಕ್ಕಿಂತಲೂ ಕಠಿಣತರವೆಂಬುದನ್ನು ಬೇಗನೆ ಕಂಡುಕೊಂಡನು. ಹಳ್ಳಿಗರಿಗೆ ಹೊರಗಿನ ಉಪದೇಶವಾಗಲಿ, ಸೂಚನೆಯಾಗಲಿ ಏನೂ ಪ್ರಯೋಜನವಾಗಲಾರದು. ತಮಗೆ ತಾವೇ ಸಹಾಯಕರಾಗುವಂತೆ ಮಾಡಲು ಯತ್ನಿಸಬೇಕು. ಹೀಗೆ ಹೇಳುವುದೇನೋ ಬಹು ಸುಲಭ; ಆದರೆ ಅದನ್ನು ಕಾರ್ಯರೂಪಕ್ಕೆ ತರುವುದು ಅತ್ಯಂತ ಕಠಿಣವೆಂಬುದನ್ನು ರವೀಂದ್ರನು ಬಲ್ಲನು. ಆದರೂ ಹಳ್ಳಿಗರಲ್ಲಿ ರೂಢವಾಗಿದ್ದ ಮಾನಸಿಕ ಹವ್ಯಾಸಗಳನ್ನು ಸಂಪೂರ್ಣ ಬದಲಾಯಿಸಿದರೆ ಅವರಲ್ಲಿ ಆತ್ಮಗೌರವವುಂಟಾಗಿ ತಮ್ಮ ಅವಶ್ಯಕತೆಗಳನ್ನು ತಾವೇ ಪೂರೈಸಿಕೊಳ್ಳಬಲ್ಲರು. ಹೀಗೆ ಮಾಡಬೇಕಾದರೆ ಶಿಕ್ಷಣವು ಅಗತ್ಯ. ನವಜನಾಂಗವಾಗತಕ್ಕ ಹಳ್ಳಿಯ ಹುಡುಗರಿಗೆ ಮುಂದಾಳುತನದಲ್ಲಿ ಮತ್ತು ಸಹಕಾರಗಳಲ್ಲಿ ಉತ್ತಮ ತರಬೇತಿಯನ್ನು ಕೊಡಬೇಕು. ಆಗ ಜನರು ಎಚ್ಚರಗೊಂಡು ಹುರಿಯಾಳುಗಳಾಗಿ 'ಒಬ್ಬನು ಎಲ್ಲರಿಗಾಗಿಯೂ ಎಲ್ಲರು ಒಬ್ಬನಿಗಾಗಿಯೂ' ದುಡಿಯಲು ಸಿದ್ಧರಾಗುವರು. ಆದರೇನು, ಹಳ್ಳಿಗರ ಬಡತನ ನಿವಾರಣೆಯಾಗದೆ, ಆರ್ಥಿಕಸಮಸ್ಯೆ ಬಗೆಹರಿಯದೆ, ಭೂಸುಧಾರಣೆಯಾಗದೆ ಇಷ್ಟೆಲ್ಲಾ ಸಿದ್ಧಿಸಿದರೂ ಪ್ರಯೋಜನವಾಗಲಾರದು! ಈ ಸಮಸ್ಯೆಗಳನ್ನು ಬಗೆಹರಿಸುವವರಾರೂ ಆಗ ಇದ್ದಿಲ್ಲ. ಆದರೆ ಹಲವು ವರ್ಷಗಳ ಮೇಲೆ ರವೀಂದ್ರನಾಥನು ಶ್ರೀನಿಕೇತನದಲ್ಲಿ ಹಳ್ಳಿಯ ಪುನರುದ್ಧಾರ ಕೇಂದ್ರವನ್ನು ಸ್ಥಾಪಿಸಿದನು. ಶ್ರೀನಿಕೇ

ತನವು ರೂಪುಗೊಳ್ಳುತ್ತಿರುವಾಗ ರವೀಂದ್ರನಾಥನಿಗೆ ಅರುವತ್ತು ವಯಸ್ಸಾಗಿತ್ತಾದರೂ ಅವನ ಉತ್ಸಾಹವೂ ಯೋಚನೆಯೂ ಮೂವತ್ತರದಾಗಿತ್ತು! ಈಗ ಅವನು ಅಧಿಕ ಜ್ಞಾನವನ್ನೂ ಅನುಭವವನ್ನೂ ಪಡೆದಿದ್ದನು.

ಇದೇ ಸಮಯದಲ್ಲಿ ರವೀಂದ್ರನಾಥನ ಪತ್ರಗಳೂ ರೇಖಾಚಿತ್ರಗಳೂ, ಸಣ್ಣ ಕತೆಗಳೂ ರೈತಜನಜೀವನಗಳಿಂದ ತುಂಬಿದ್ದುವು. ಆತನು ಶಿಲೇದದಲ್ಲಿಯೂ ಇತರ ಕಡೆಗಳಲ್ಲಿಯೂ ಇದ್ದಾಗ ತನ್ನ ಪ್ರೀತಿಯ ಸೊಸೆಗೆ ಬರೆದ ಪತ್ರಸಂಗ್ರಹವೇ 'ಬಂಗಾಳ ಕ್ಷಣದರ್ಶನ'. ಇವುಗಳಲ್ಲಿ ಬೀಜರೂಪವಾಗಿದ್ದ ಆತನ ಭಾವನೆಯೇ ಮುಂದೆ ಸಣ್ಣ ಕತೆಯಾಗಿ ಮಾರ್ಪಟ್ಟಿತು. ಉದಾಹರಣೆಗಾಗಿ—ಪಟ್ಟಣದ ಜಾಡು ಹಿಡಿದ, ಹಳ್ಳಿಯ ಸೇವಕಿಹುಡುಗಿಯೊಬ್ಬಳಿಗೆ ಓದು ಕಲಿಸುತಿದ್ದ, 'ಹಳ್ಳಿಯ ಅಂಚೆಯ ಅಧಿಕಾರಿ' ಕತೆಯನ್ನು ನೋಡಬಹುದು. ರವೀಂದ್ರನಾಥನ ಹಲವು ಸಣ್ಣ ಕತೆಗಳು ಇಂಗ್ಲೀಷಿಗೆ ಭಾಷಾಂತರಗೊಂಡು ಆತನ ಅತ್ಯುತ್ತಮ ಬರೆಹಗಳ ಸಾಲಿಗೆ ಸೇರಿವೆ. ಇವು ಬಂಗಾಳದ ವಿದ್ಯಾವಂತ ನಾಗರಿಕರಿಗೆ ತಮ್ಮ ದೇಶದ ಹಳ್ಳಿಗರ ಮೇಲೆ ಆಸಕ್ತಿ ಹುಟ್ಟುವಂತೆ ಮಾಡಿವೆ.

## ಅಧ್ಯಾಯ ೬.

## 'ಭಾರತದ ಸ್ಫೂರ್ತಿಯ ನೆಲೆವೀಡು'

ರವೀಂದ್ರನಾಥನಿಗೆ ಸುಮಾರು ನಲುವತ್ತು ವರ್ಷ ವಯಸ್ಸಾದಾಗ (1900-1901ರಲ್ಲಿ) ಅವನ ಜೀವನದಲ್ಲಿ ಹೊಸತೊಂದು ಕಾಲ ಆರಂಭವಾಯಿತು. ಈ ಸಮಯದಲ್ಲಿ ಅವನು ಅವಿಶ್ರಾಂತನಾಗಿದ್ದನು. ಯಾವುದೋ ದಾರಿಯನ್ನು ಹುಡುಕುತಿದ್ದಂತೆ ಭಾಸವಾಯಿತು. ಜೀವನದಲ್ಲಿ ನೂತನ ಉದ್ಯಮವನ್ನು ಇಲ್ಲವೇ ಸಾಹಸಕಾರ್ಯವನ್ನು ಆರಂಭಿಸೆಂದು ಸಮಯಪುರುಷನು ತನ್ನನ್ನು ಪ್ರೋತ್ಸಾಹಿಸುವಂತೆ ತೋರಿತು. ಆದರೆ ಆರಂಭದಲ್ಲಿ ತಾನು ಕೈಕೊಳ್ಳಬೇಕೆಂದಿರುವ ಕಾರ್ಯದ ರೂಪರೇಷೆಯು ಆತನಿಗೆ ಸ್ಪಷ್ಟವಾಗಿ ತಿಳಿದಿರಲಿಲ್ಲ.

ಇದೇ ದಿನಗಳಲ್ಲಿ ರವೀಂದ್ರನಾಥನು ಸುಂದರ ಭಕ್ತಿಪೂರ್ಣ ಗೀತಗಳನ್ನು ರಚಿಸಿ ತನ್ನ ದೈವಭಕ್ತಿಯನ್ನು ತೋರ್ಪಡಿಸಿದನು. ಅವನ ತಂದೆಯಾದ 'ಮಹರ್ಷಿ' ಈಗ ಹಣ್ಣು ಮುದುಕನಾಗಿದ್ದನು; ಹೆಚ್ಚಿನ ವೇಳೆಯನ್ನು ಪ್ರಾರ್ಥನೆಯಲ್ಲಿಯೂ ಮೌನಧ್ಯಾನದಲ್ಲಿಯೂ ಕಳೆಯುತಿದ್ದನು. ರವೀಂದ್ರನಾಥನು ತಂದೆಯ ಕಾಲಬಳಿಯಲ್ಲಿ ಕುಳಿತು ತನ್ನ ಹೊಸ ಕವನವಾದ 'ನೈವೇದ್ಯ'ದಿಂದ

ಕೆಲವು ಗೀತಗಳನ್ನು ಹಾಡುತಿದ್ದನು. ಹಾಡುಗಳನ್ನು ಕೇಳಿದಾಗ ಮಹರ್ಷಿಗೆ ಆತ್ಮಾನಂದವಾಗುತಿತ್ತು. ತನ್ನ ಮಗನು ಸತ್ಯವೇ ದೇವರೆಂಬುದನ್ನು ತಿಳಿದು ಪ್ರೀತಿಸತೊಡಗಿದನೆಂಬುದನ್ನು ಅರಿತು ಹಿರಿಹಿಗ್ಗಿದನು. ಈ ಪುಸ್ತಕವನ್ನು ಸಾಧುಸ್ವರೂಪಿಯಾದ ತನ್ನ ತಂದೆಗೆ ಕೃತಜ್ಞತೆಯೊಂದಿಗೆ ಅರ್ಪಿಸಿದನು.

ಮಹರ್ಷಿ ಆ ದಿನ ಕೇಳಿದ್ದ ಸರಳ ನಿರ್ಮಲ ಗೀತಗಳಲ್ಲಿ ಒಂದು ಹೀಗಿದೆ:

'ನೀನವರಿಗಿಂತಲೂ ಎನಗಾಪ್ತನೆಂಬುದನು
ಬಂಧುಗಳು ಎನ್ನವರು ಏನೇನನರಿಯರ್.
ನಿನ್ನ ಮೌನದ ಮಾತು ಎನ್ನೆದೆಯ ತುಂಬಿಹುದ—
ನೆನ್ನೊಡನೆ ನುಡಿಯುವಾ ಎನ್ನಾಪ್ತರರಿಯರ್.
ನಿನ್ನೊಡನೆ ನಾನೊರ್ವನೇ ನಡೆಯುತಿರ್ಪುದನು
ಎನ್ನ ದಾರಿಯ ಕವಿಯುತಿರ್ಪರರಿಯರ್.
ಅವರ ಪ್ರೇಮವು ನಿನ್ನನೆನ್ನ ಹೃನ್ಮಂದಿರಕೆ
ಬರಮಾಡುತಿರ್ಪುದನು ಅವರೆಂತುಮರಿಯರ್.'

'ಹಿಂದಿನ ದಿನಗಳಲ್ಲಿ', ಮಹರ್ಷಿ ಮುಗುಳ್ನಗುತ್ತಾ ಹೇಳಿದನು, 'ಕವಿ ತನ್ನ ಕಾವ್ಯಗಳನ್ನು ರಾಜಾಸ್ಥಾನದಲ್ಲಿ ಓದಿ ರಾಜನಿಂದ ರಾಜಯೋಗ್ಯವಾದ ಮನ್ನಣೆಯನ್ನು ಪಡೆಯುತಿದ್ದನು. ಈಗಿನ ಕಾಲದಲ್ಲಿ ನಮ್ಮ ಕವಿ ರಾಜ ಮರ್ಯಾದೆಯನ್ನು ಹಾರೈಸುತ್ತಾ ಕುಳಿತರೆ ನಿರಾಶನಾಗಬೇಕಷ್ಟೆ. ಆದುದರಿಂದ ಆ ಕಾರ್ಯವನ್ನು ಅಗತ್ಯವಾಗಿ ನಾನೇ ಮಾಡುವೆನು!' ಹೀಗೆನ್ನುತ್ತಾ ಆ ವೃದ್ಧನು ತನ್ನ ಮಗನಿಗೆ ಆತನ ಪುಸ್ತಕದ ಪ್ರಕಟನೆಯ ವೆಚ್ಚಕ್ಕಾಗಿ ಕೊಂಚ ಹಣವನ್ನು ಕೊಟ್ಟನು. ಮುಂದೆ ಪುಸ್ತಕವು ಪ್ರಕಟವಾದಾಗ ರವೀಂದ್ರನಾಥನು ಮತ್ತೊಮ್ಮೆ ತಂದೆಯ ಆಶೀರ್ವಾದವನ್ನು ಬೇಡುವುದಕ್ಕಾಗಿ ಬಂದನು; ಈ ಸಲ ಹಣಕ್ಕಿಂತಲೂ ಅಧಿಕವಾದುದನ್ನು ಬೇಡಲು ಬಂದಿದ್ದನು. ಶಾಂತಿನಿಕೇತನದ ಆಶ್ರಮದಲ್ಲಿ ಒಂದು ಶಾಲೆಯನ್ನು ಸ್ಥಾಪಿಸಲು ಅಪ್ಪಣೆಕೊಡಬೇಕೆಂದೂ ಈ ಶಾಲೆಯಲ್ಲಿ ತಾನೇ ಶಿಕ್ಷಕನಾಗಿ ಮಕ್ಕಳಿಗೆ ಸ್ವತಂತ್ರ ವೃತ್ತಿಯಲ್ಲಿ ಆನಂದವೂ ಭಾವೀಜೀವನದಲ್ಲಿ ಸುಖವೂ ಲಭಿಸುವಂತೆ ಮಾಡುವೆನೆಂದೂ ತಂದೆಯನ್ನು ಕೇಳಿಕೊಂಡನು. ಮಹರ್ಷಿಯು ಮಗನ ಮಾತನ್ನು ಕೇಳಿ ಸಂತೋಷದಿಂದ ಹರಸಿದನು; ಶಾಲೆಯು ಆರಂಭವಾಯಿತು.

1901ರಲ್ಲಿ ರವೀಂದ್ರನಾಥನು ಸಕುಟುಂಬಿಯಾಗಿ ಬಂದು ಶಾಂತಿನಿಕೇತನದಲ್ಲಿ ನೆಲಸಿದನು. ಈ ಸ್ಥಳವು ಆತನಿಗೆ ಮೊದಲೇ ಪರಿಚಿತವಾಗಿತ್ತು. ಆತನ

ತಂದೆಯೂ ಹಿರಿಯಣ್ಣನೂ ತಮ್ಮ ವೇಳೆಯ ಬಹುಭಾಗವನ್ನು ಅಲ್ಲಿ ಕಳೆಯುತಿದ್ದರು. ಅವರ ಶಾಂತ ಜೀವನ ಹಾಗೂ ಪ್ರಾರ್ಥನೆಯಲ್ಲಿ ಭಾಗಿಗಳಾಗಲು ಸ್ನೇಹಿತರೂ ಅಲ್ಲಿಗೆ ಹೋಗಿ ಬಹುಕಾಲ ಅಥವಾ ಸ್ವಲ್ಪಕಾಲವಿದ್ದು ಮರಳುತಿದ್ದರು. ಈ ಆಶ್ರಮವು ಅಂದವಾದ ಮರಗಳಿಂದ ತುಂಬಿದ್ದು ವಿಶಾಲ ಪ್ರದೇಶವು ದಿಗಂತದವರೆಗೂ ವ್ಯಾಪಿಸಿತ್ತು. ಮಹರ್ಷಿಯು ಅಲ್ಲಿ ಪ್ರಾರ್ಥನಾ ಮಂದಿರವೊಂದನ್ನು ಕಟ್ಟಿಸಿದ್ದನು. 1900ರಲ್ಲಿ ಅದರ ಹತ್ತನೆಯ ವಾರ್ಷಿಕೋತ್ಸವದಲ್ಲಿ ರವೀಂದ್ರನಾಥನು ಭಾಷಣವಿತ್ತನು. ಈ ಆಶ್ರಮ ಜೀವನವು ಸರಳ ಸ್ವತಂತ್ರವಾಗಿತ್ತು. ಅಲ್ಲಿ ಕೆಲವೇ ಸರಳ ನಿಯಮಗಳಿದ್ದುವು. ಆಶ್ರಮದ್ವಾರದಲ್ಲಿರುವ ಶಾಸನವೊಂದು ಹೀಗಿದೆ—'ಈ ಆಶ್ರಮದಲ್ಲಿ ಅದೃಶ್ಯ ಏಕಮೇವ ದೈವವನ್ನು ಪೂಜಿಸಬೇಕು'. ಆರಾಧನೆಯ ಶಾಂತಿಯನ್ನು ರಕ್ಷಿಸುವುದಕ್ಕೆ ಆಶ್ರಮವಾಸಿಗಳು ಈ ಮೂರು ನಿಯಮಗಳನ್ನು ಪಾಲಿಸತಕ್ಕದು—ಪ್ರಾರ್ಥನಾ ಕಾಲದಲ್ಲಿ ಯಾವುದೇ ವಿಗ್ರಹವನ್ನು ಉಪಯೋಗಿಸಬಾರದು, ಪರಮತ ದೂಷಣೆಯನ್ನು ಮಾಡಬಾರದು, ಪಶು ಪಕ್ಷಿಗಳಿಗೆ ನೋವನ್ನುಂಟುಮಾಡಬಾರದು.

ರವೀಂದ್ರನಾಥನು ಶಾಲೆಯನ್ನು ಸ್ಥಾಪಿಸುವುದಕ್ಕೂ ಶಾಂತಿನಿಕೇತನವನ್ನೇ ಯೋಗ್ಯಸ್ಥಳವೆಂದು ಆರಿಸುವುದಕ್ಕೂ ಕಾರಣವೇನಿರಬಹುದೆಂಬುದನ್ನು ಸುಲಭವಾಗಿ ಕಂಡುಕೊಳ್ಳಬಹುದು. ಆತನಿಗೆ ಮಕ್ಕಳೆಂದರೆ ಪಂಚಪ್ರಾಣ! ಆತನಿಗೂ ಹಲವು ಸಣ್ಣಸಣ್ಣ ಮಕ್ಕಳಿದ್ದರು. ಮಕ್ಕಳೆಲ್ಲರೂ ಸುಖವಾಗಿರಬೇಕೆಂದೂ ತಮ್ಮ ದೈಹಿಕ ಮಾನಸಿಕ ಶಕ್ತಿಗಳ ಪರಿಪೂರ್ಣ ಪ್ರಯೋಜನವನ್ನು ಪಡೆಯುವಂತೆ ಯೋಗ್ಯ ತರಬೇತಿಹೊಂದಬೇಕೆಂದೂ ರವೀಂದ್ರನು ಬಯಸಿದ್ದನು. ವಿದ್ಯಾಭ್ಯಾಸದಲ್ಲಿದ್ದ ಹಲವು ವರ್ಷಗಳ ಸ್ವಾನುಭವ ಮತ್ತು ತನ್ನ ಬಾಲ್ಯದ ಘಟನೆಗಳ ಸ್ಪಷ್ಟ ಸ್ಮರಣೆಗಳು ಆತನಿಗೆ ಮಕ್ಕಳ ಶಿಕ್ಷಣದಲ್ಲಿ ಮಾರ್ಗದರ್ಶಿಗಳಾದುವು. ಅವನು ಮಗುವಾಗಿದ್ದಾಗ ಯಾವುದನ್ನು ದ್ವೇಷಿಸಿದ್ದನು?—ಆ ಸೆರೆಮನೆವಾಸವನ್ನು. ನಗರದ ಮಧ್ಯದಲ್ಲಿದ್ದ ತನ್ನ ಮನೆಯೇ ಸೆರೆಮನೆಯಾಗಿತ್ತು; ಇದಕ್ಕಿಂತಲೂ ಕಠಿಣ ಸೆರೆಮನೆ ಶಾಲಾಕೊಠಡಿಯಾಗಿತ್ತು. ಅವನು ಯಾವುದನ್ನು ಹಾರೈಸುತಿದ್ದನು?—ನಗರದಲ್ಲಿ ಮಧ್ಯಾಹ್ನಕಾಲದಲ್ಲಿ ಆಕಾಶದಲ್ಲಿ ತಾನೇತಾನಾಗಿ ಮೇಲೇರುತಿದ್ದ ಗಾಳಿಪಟವನ್ನು. ಮಗುವಾಗಿದ್ದಾಗ ಮತ್ತೇನನ್ನು ದ್ವೇಷಿಸಿದ್ದನು?—ಮಲಿನವಾಗಿದ್ದ ಪುಸ್ತಕದಲ್ಲಿನ ತನಗೆ ಅರ್ಥವಾಗದೆ ಬೇಸರವನ್ನುಂಟುಮಾಡುತಿದ್ದ ನಿರ್ಜೀವ ಪಾಠಗಳನ್ನು; ಮುಖ್ಯವಾಗಿ ಇಂಗ್ಲೀಷು ಪುಸ್ತಕವನ್ನು. ಮತ್ತೇನನ್ನು ಪ್ರೀತಿಸುತಿದ್ದನು ಮತ್ತು ಯಾವುದರಿಂದ ಆಯಾಸಗೊಳ್ಳುತ್ತಿರಲಿಲ್ಲ?—ಇಷ್ಟಬಂದಾಗ ಹಾಡುಗಳನ್ನು ಕಲಿಯು

ವುದು, ತಾನೇ ಶೋಧಿಸಿದ ಗ್ರಂಥಸಂಗ್ರಹಗಳನ್ನು ಗಂಟೆಗಟ್ಟಲೆ ಓದುವುದು, ಅನ್ವೇಷಣೆ ಮಾಡುವುದು, ಮಹಾದ್ಭುತ ಸಾಹಸಿಯಾಗಿದ್ದ 'ರಾಬಿನ್‌ಸನ್ ಕ್ರೂಸೋ'ನಂತೆ (ಸಾಧ್ಯವಾದರೆ ಮಾತ್ರ!) ಜೀವಿಸಲು ಹೆಣಗುವುದು—ಇವು ಗಳಲ್ಲೆಲ್ಲ ಉತ್ಸಾಹವನ್ನು ತೋರಿದ್ದನು. ತನ್ನ ಶಾಲೆಯ ಮಕ್ಕಳೆಲ್ಲ ತನ್ನಂತೆ ಯೇ ಅನ್ವೇಷಣೆ ಮತ್ತು ಪ್ರಯೋಗಗಳನ್ನು, ವಿವಿಧ ಚಟುವಟಿಕೆಗಳನ್ನು, ಸಂಗೀತ ಮತ್ತು ನಾಟಕಗಳನ್ನು ಗುಲ್ಲುಮಾಡುತ್ತಾ ಕಲಿಯಬೇಕೆಂಬುದು ರವೀಂದ್ರ ನಾಥನ ಮಹತ್ವಾಕಾಂಕ್ಷೆಯಾಗಿತ್ತು! 'ರಾಬಿನ್‌ಸನ್ ಕ್ರೂಸೋ'ನಂತೆ ಮಕ್ಕಳೂ ಪ್ರಕೃತಿಯೊಂದಿಗೆ ಹೋರಾಡುತ್ತಾ ಜೀವನ ನಡೆಸಬೇಕು ಮತ್ತು ಪ್ರಕೃತಿಯು ಶತ್ರುವಲ್ಲ—ಮಿತ್ರನೆಂಬುದನ್ನು ತಿಳಿದುಕೊಳ್ಳಬೇಕು. ರವೀಂದ್ರನಾಥನು ಚಿಕ್ಕವ ನಿದ್ದಾಗ ಜೊರಸಾಂಕೋದ ಆವರಣದ ಬದಿಯಲ್ಲಿದ್ದ ಬಾನುದ್ದ ಬೆಳೆದ ತೆಂಗಿನ ಮರಗಳನ್ನು ಇನ್ನೂ ಮರೆತಿರಲಿಲ್ಲ! ಈಗಲೂ ಅವು ಆತನೊಂದಿಗೆ ಸೋದರ ಪ್ರೇಮದಿಂದ ಮಾತಾಡುತ್ತಿರುವಂತೆ ತೋರಿತು. ಇಲ್ಲಿ ಶಾಂತಿನಿಕೇತನದಲ್ಲಿ 'ವೃಕ್ಷಗಳ ಮಹಾ ಭ್ರಾತೃಭಾವವು' ಆ ತನ್ನ ಮಕ್ಕಳನ್ನು ಸ್ವಾಗತಿಸಲು ಕಾದಿತ್ತು!

ಮೊದಲನೆಯ ವರ್ಷದಲ್ಲಿ ರವೀಂದ್ರನಾಥನಿಗೆ ಐದು ಮಂದಿ ವಿದ್ಯಾರ್ಥಿ ಗಳು ಮಾತ್ರವಿದ್ದರು; ಐವರಲ್ಲಿ ಅವನ ಮಗನೂ ಒಬ್ಬನಾಗಿದ್ದನು. ಆದರೆ ನಿಧಾನವಾಗಿ ಶಾಲೆಯು ಅಭಿವೃದ್ಧಿಯಾಯಿತು. ಕೆಲವು ವರ್ಷಗಳ ಅನಂತರ ವಿದ್ಯಾರ್ಥಿಗಳ ಸಂಖ್ಯೆ ನೂರಐವತ್ತಕ್ಕೇರಿತು. ಈಗಲೀಗ ಹಲವು ಹುಡುಗಿ ಯರೂ ತಮ್ಮದೇ ಪ್ರತ್ಯೇಕ ಭವನದಲ್ಲಿದ್ದು ಹುಡುಗರೊಂದಿಗೆ ಆಟಪಾಠಗಳಲ್ಲಿ ಭಾಗವಹಿಸುತ್ತಿರುವರು.

ರವೀಂದ್ರನಾಥನು ಶಾಲೆಯನ್ನು ಆರಂಭಿಸಿದಾಗ ಪುರಾತನ ತಪೋವನ ಪದ್ಧತಿ ಆತನ ಮನದಲ್ಲಿ ನೆಲಸಿತ್ತು. ಆ ತಪೋವನ ಪದ್ಧತಿಯನ್ನು ಸ್ಥಾಪಿಸಿದ ವಿದ್ವಾಂಸರೂ ವಿದ್ಯಾರ್ಥಿಗಳೂ ಸತ್ಯಸಂಶೋಧಕರಾಗಿದ್ದರು; ಸತ್ಯಸಂಶೋಧನೆ ಗಾಗಿಯೇ ಜನನಿಬಿಡವಾದ ಸ್ಥಳವನ್ನು ತೊರೆದು ದೂರದ ಪ್ರಕೃತಿ ಸೌಂದರ್ಯದ ನೆಲೆವೀಡಾದ ಅರಣ್ಯವನ್ನು ತಮ್ಮ ನಿವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದರು. ಮಕ್ಕಳು ತಮ್ಮ ಗುರುಗಳೊಂದಿಗೆ ಸರಳ ಜೀವನವನ್ನು ಸಾಗಿಸುತಿದ್ದರು. ವಿದ್ಯಾರ್ಥಿಗಳು ಸಂಪತ್ತಿಗಿಂತಲೂ ಸತ್ಯವು ಮಹತ್ವವಾದುದೆಂಬುದನ್ನು ವಿಚಾರಿ ಸುವುದಕ್ಕೂ, ಪ್ರಕೃತಿಯನ್ನು ಪ್ರೇಮಿಸುವುದಕ್ಕೂ, ಸಕಲ ಜೀವರಾಶಿಗಳನ್ನು ಗೌರವಿಸುವುದಕ್ಕೂ ಕಲಿಯುತಿದ್ದರು. ಬಾಹ್ಯಾಡಂಬರಕ್ಕೆ ಮಾರುಹೋಗದೆ ಅಂತರಂಗದಲ್ಲಿ ಸತ್ಯವನ್ನು ಪ್ರೇಮಿಸುವಂತಹ ಈ ದಿವ್ಯ ಪದ್ಧತಿಯನ್ನು ಪ್ರಪಂಚಕ್ಕೆ ತಿಳಿಯಪಡಿಸುವುದು ಭಾರತದ ಆದ್ಯ ಕರ್ತವ್ಯವೆಂಬುದನ್ನು ರವೀಂದ್ರನಾಥನು

ನಂಬಿದ್ದನು. ಆದರೆ ಭಾರತದ ಪಟ್ಟಣಗಳಲ್ಲಿಯೂ ನಗರಗಳಲ್ಲಿಯೂ ವಾಸಿಸುವ ಭಾರತೀಯರೇ ಈ ಅಮೂಲ್ಯ ಸಂದೇಶವನ್ನು ಮರೆಯುತ್ತಿದ್ದಾರೆ. ಜನರು ಹಲವು ವಸ್ತುಗಳನ್ನು—ಹಣ, ಮೋಟಾರುಗಳು, ರೇಡಿಯೋಗಳು—ಕೂಡ ಹಾಕುತಿದ್ದಾರೆ; ಮತ್ತು ನಿಜವಾದ ಸುಖದ ರಹಸ್ಯವನ್ನೇ ಕೈಬಿಡುತ್ತಿದ್ದಾರೆ. ಭಾರತವು ಮರಳಿ ಸೃಜಸುಖದ ರಹಸ್ಯವನ್ನು ಶೋಧಿಸಬೇಕಾಗಿದೆ. ಇದಕ್ಕಾಗಿಯೇ ಜನರ ನೂಕುನುಗ್ಗಲು ಕೋಲಾಹಲವಿಲ್ಲದ ಅರಣ್ಯಮಧ್ಯದ ನೂತನ ಶಾಲೆಯು ಅಗತ್ಯವಿದೆ. ಶಾಂತಿನಿಕೇತನವು ಇಂತಹ ಶಾಲೆಗಳಲ್ಲಿ ಮೊದಲನೆಯದಾಗಿರಬೇಕೆಂದೂ ಆದರೆ ಇದು ಪುರಾತನ ಶಾಲೆಗಳ ಪಡಿನೆಳಲಾಗಿರಬಾರದೆಂದೂ ರವೀಂದ್ರನಾಥನು ಭಾವಿಸಿದನು. ಈಗಿನ ಕಾಲಕ್ಕೆ ತಕ್ಕಂತೆ ಬಾಹ್ಯ ವೇಷದಲ್ಲಿ ಸುಧಾರಣೆಯನ್ನು ಮಾಡಿಕೊಂಡರೂ ಅಂತರಂಗವು ಪುರಾತನರ ಸ್ಫೂರ್ತಿಯಿಂದ ಕೂಡಿರಬೇಕೆಂದು ಆಶಿಸಿದನು. ಶಾಂತಿನಿಕೇತನವನ್ನು ರವೀಂದ್ರನಾಥನ ಮಿತ್ರರಲ್ಲೊಬ್ಬನು ಕರೆದಂತೆ ‘ಭಾರತದ ಸ್ಫೂರ್ತಿಯ ನೆಲೆವೀಡ’ನ್ನಾಗಿ ಮಾಡಲು ಬದ್ಧಕಂಕಣನಾದನು.



ಶಾಂತಿನಿಕೇತನವು ಕವಿಯೊಬ್ಬನ ಶಾಲೆಯಾಗಿತ್ತಾದುದರಿಂದ ಅದು ಸಂಗೀತ ಮತ್ತು ಹಾಡುಗಳಿಂದ ತುಂಬಿತ್ತು. ‘ಶಾಂತಿನಿಕೇತನವು ಕಾಗದದಲ್ಲಿ ಬರೆದ ಕವನವಲ್ಲ; ಜೀವನ ಕವನ,’ ರವೀಂದ್ರನೊಮ್ಮೆ ಹೇಳಿದನು. ‘ಒಮ್ಮೆ, ಚಳಿಗಾಲದ ಪ್ರಶಾಂತದಿನದಂದು ಕೆಲವೇ ಮಂದಿ ಹುಡುಗರೊಡನೆ ಪುಷ್ಪವಾಗಿ ಬೆಳೆದ ಸಾಲವೃಕ್ಷಗಳ ಬೆಚ್ಚಗಿನ ನೆರಳಲ್ಲಿ ಕುಳಿತು ಕವಿತೆಯನ್ನು ಬರೆಯಲು ಪ್ರಾರಂಭಿಸಿದೆ . . . . ಆದರೆ ಮಾತುಗಳಿಂದಲ್ಲ.’ ಶಾಲಾದಿನಗಳು ಆರಂಭವಾಗುವುದೂ ಅಂತ್ಯವಾಗುವುದೂ ಪ್ರಾರ್ಥನಾಗೀತಗಳಿಂದಲೇ. ರವೀಂದ್ರನು ತಾನು ರಚಿಸಿದ ಗೀತಗಳನ್ನು ಮಕ್ಕಳಿಗೆ ಕಲಿಸಿದನು. ಪ್ರತಿದಿನ ಮುಂಜಾನೆ ಹುಡುಗರ ತಂಡವೊಂದು ಆಶ್ರಮದ ಸುತ್ತಲೂ ಗೀತಗಳನ್ನು ಹಾಡುತ್ತಾ ಬಂದು ಎಲ್ಲರನ್ನೂ ಎಬ್ಬಿಸುವುದು. ಆ ಗೀತಗಳು ಉದಯಾಸ್ತಗಳನ್ನು, ವಸಂತ ಕಾಲದ ಹೂಗಳನ್ನು, ಶರತ್ಕಾಲದ ಬೆಳೆಯನ್ನು ಮತ್ತು ಬೆಳದಿಂಗಳ ಪ್ರಶಾಂತ ರಾತ್ರಿಯನ್ನು ಕುರಿತು ಕವೀಂದ್ರನು ಪರಮಾತ್ಮನಿಗೆ ಅರ್ಪಿಸಿದ ಕಾಣ್ಕೆಗಳು; ಧನ್ಯವಾದಗಳು. ಅವುಗಳಲ್ಲೊಂದರ ಭಾವ ಹೀಗಿದೆ:—

‘ಎನ್ನ ಸಂಧ್ಯಾ ಕಾಲದೊಳಗೆ ನೀನೈತರುವೆ ಮೋಹನಾಕಾರನಾಗಿ
ನಿನಗೆ ನಾ ಬಾಗುವೆನು ನಿನ್ನನಾರಾಧಿಪೆನು.
ನಿನ್ನಾ ಪ್ರಮೋದವನು ಎನ್ನಂತರಾಳದಾ ಕತ್ತಲಲಿ ಸೇರಿಸುತಿಹೆ
ನಿನಗೆ ನಾ ಬಾಗುವೆನು ನಿನ್ನನಾರಾಧಿಪೆನು.

ಎನ್ನ ಮೇಗಡೆ ಬಾಗಿದಾ ಶಾಂತ ಬಾಂದಳದಿ
ಬೀಸುತಿರುವಾ ಮಂದಮಾರುತನ ಜೋಗುಳದಿ
ಗಾಢನಿದ್ರಾಸಕ್ತನಾಗಿ ಮಲಗಿರುವಲ್ಲಿ
ನಿನಗೆ ನಾ ಬಾಗುವೆನು ನಿನ್ನನಾರಾಧಿಪೆನು.

ಬಳಲಿ ಬೆಂಡಾದ ಭೂತಲವನಾವರಿಸಿರ್ಪ
ನೀಲವರ್ಣಾಕಾಶ ಸಿಂಹಾಸನವನೇರಿ
ಚಲಿಸದಿರುವಾ ತಾರೆಗಳ ಮೌನ ಮಂತ್ರದಲಿ
ನಿನಗೆ ನಾ ಬಾಗುವೆನು ನಿನ್ನನಾರಾಧಿಪೆನು.

ಈ ಪ್ರವಾಸಿಗಳ ಶ್ರಮಪರಿಹಾರ ಗೃಹದಲ್ಲಿ
ಈ ಸುವಾಸನೆಯ ಸಂಧ್ಯಾಕುಸುಮ ಮೂಲೆಯಲಿ
ನಿನಗೆ ನಾ ಬಾಗುವೆನು ನಿನ್ನನಾರಾಧಿಪೆನು.'

ಮುಂದಿನ ವರ್ಷಗಳಲ್ಲಿ ಈ ಶಾಲೆಗೆ ವಿಶೇಷವಾದ ಸೇವೆಯನ್ನು ಸಲ್ಲಿಸಿದವನೇ ಸುಪ್ರಸಿದ್ಧ ಸಂಗೀತಗಾರನಾಗಿದ್ದ ದೀನೇಂದ್ರನಾಥನು; ರವೀಂದ್ರನ ಅಳಿಯನು. ಇವನು ತನ್ನ ಮಾವನ ನವೀನ ಗೀತಗಳ ಧಾಟಿಯನ್ನು ಮಕ್ಕಳಿಗೆ ಅಭ್ಯಾಸಮಾಡಿಸುತಿದ್ದನು. ಮಕ್ಕಳು ಈ ಗೀತಗಳನ್ನು ಬಹಳವಾಗಿ ಮೆಚ್ಚಿ ಅಭ್ಯಾಸಮಾಡುತಿದ್ದರಲ್ಲದೆ ಕವಿಯು ಅನುಭವಿಸಿದ್ದ ಆನಂದವನ್ನೂ ದೇವರ ಕಡೆಗಿದ್ದ ಆತನ ಮನೋಭಾವನೆಗಳನ್ನೂ ತಿಳಿಯುತಿದ್ದರು.

ರವೀಂದ್ರನು ಶಾಲಾಮಕ್ಕಳಿಗೆ ಋತು ಬದಲಾವಣೆಯ, ಹಳ್ಳಿಗಳ ಜನಜೀವನದ ಕೆಲವು ಮಹತ್ವವಾದ ಘಟನೆಗಳ ಉತ್ಸವಗಳನ್ನು ಗೀತಗಳೊಂದಿಗೆ ಆಚರಿಸಲು ಕಲಿಸಿದನು. ಶಾಂತಿನಿಕೇತನದಲ್ಲಿ ವಸಂತ, ವರ್ಷ, ಶರತ್ಕಾಲಗಳ ಉತ್ಸವಗಳಿವೆ. ಸಸಿಗಳನ್ನು ನೆಡುವುದು, ಗ್ರಾಮಸೇವೆ, ಉಳುವುದೇ ಮೊದಲಾದ ಹಬ್ಬಗಳನ್ನು ಆಶ್ರಮದಲ್ಲಿ ಆಚರಿಸುವರು. ಈ ಹಬ್ಬಗಳನ್ನು ಸಂಗೀತನೃತ್ಯ ಗೀತಾದಿಗಳಿಂದಲೂ ವಿವಿಧ ವರ್ಣರಂಜಿತ ಅಲಂಕಾರಗಳಿಂದಲೂ ಕೂಡಿದ ಮೆರವಣಿಗೆಯೊಂದಿಗೆ ನೆರವೇರಿಸುವರು. ಕೆಲವು ವೇಳೆ ಈ ಋತುಸಂಬಂಧವಾದ ಹಬ್ಬಗಳಲ್ಲೊಂದರಲ್ಲಿ ವಿಶೇಷ ನಾಟಕವನ್ನು ಅಭಿನಯಿಸುತಿದ್ದರು. 'ಶಾರದೋತ್ಸವ' ಮತ್ತು 'ಫಾಲ್ಗುಣಿ' ನಾಟಕಗಳು ಈ ಉದ್ದೇಶದಿಂದಲೇ ರವೀಂದ್ರನಿಂದ ಬರೆಯಲ್ಪಟ್ಟುವು. 'ವಸಂತ' ನಾಟಕವು ಆಮೇಲೆ ರಚಿಸಲ್ಪಟ್ಟಿತು. ವಿದ್ಯಾವ್ಯಾಸಂಗದಲ್ಲಿ ನಾಟ್ಯಾಭಿನಯಕ್ಕಿರುವ ಮಹತ್ವವನ್ನು ರವೀಂದ್ರನು ಚೆನ್ನಾಗಿ ಅರಿತಿದ್ದನು. ಸಾಮಾನ್ಯವಾಗಿ ಶಾಲೆಯಲ್ಲಿ ಪ್ರತಿ ಸರದಿಯ ಅಂತ್ಯ

ದಲ್ಲಿ ಯಾವುದಾದರೊಂದು ನಾಟಕವನ್ನಾಡುವುದು ರೂಢಿಯಾಗಿ ಬಿಟ್ಟಿತ್ತು. ಆರಂಭದ ದಿನಗಳಲ್ಲಿ ಮಕ್ಕಳ ಸಂಖ್ಯೆ ಕಡಿಮೆಯಿದ್ದಾಗ ಪ್ರತಿಯೊಬ್ಬನಿಗೂ ನಾಟಕದಲ್ಲಿ ಪಾತ್ರವಹಿಸುವ ಅವಕಾಶಸಿಗುತಿತ್ತು. ನಾಟಕಾಭ್ಯಾಸ ಕಾಲದಲ್ಲಿ ಶಾಲಾವಿದ್ಯಾರ್ಥಿಗಳೆಲ್ಲರೂ ಸೇರುತಿದ್ದರು. ಈ ಅಭ್ಯಾಸಗಳನ್ನು ನೋಡುವುದ ರಿಂದಲೂ ವೇಷಭೂಷಣದೃಶ್ಯಾದಿಗಳ ಕುರಿತಾಗಿದ್ದ ಚರ್ಚೆಗಳನ್ನು ಕೇಳುವುದ ರಿಂದಲೂ ಮಕ್ಕಳಲ್ಲಿ ವಿಶೇಷ ಪರಿಣಾಮವಾಗದಿರದು. ಕವಿಯ ಅಚ್ಚುಮೆಚ್ಚಿನ 'ಅಂಚೆಮನೆ' ನಾಟಕವು ಚಿಕ್ಕ ನಟರ ಸಲುವಾಗಿಯೇ ರಚಿಸಲ್ಪಟ್ಟಿತು.

ತರುಣ ಅಧ್ಯಾಪಕರ ತಂಡವೊಂದನ್ನು ಆರಿಸಲು ರವೀಂದ್ರನು ಬಹಳ ಶ್ರಮವಹಿಸಿದನು. ಸಾಹಿತ್ಯ, ವಿಜ್ಞಾನ, ಚರಿತ್ರೆಗಳಲ್ಲಿ ಮಕ್ಕಳಿಗೆ ಉತ್ಸಾಹ ಅಭಿರುಚಿಗಳುಂಟಾಗುವಂತೆ ಕಲಿಸಬಲ್ಲವರನ್ನೇ ಆರಿಸಿದನು. ನಾವು ವಾಸಿಸು ತ್ತಿರುವ ಈ ಜಗತ್ತಿನ ಹಾಗೂ ಇಲ್ಲಿನ ಜನರ ವಿಷಯಗಳನ್ನು ತಿಳಿಯಲು ಸರಿ ಯಾದ ಕ್ರಮದಲ್ಲಿ ಕಲಿಸಿದರೆ ಮಕ್ಕಳು ಸ್ವಾಭಾವಿಕವಾಗಿ ಕುತೂಹಲ ಗೊಳ್ಳುವರು ಎಂಬುದನ್ನು ರವೀಂದ್ರನು ಸ್ವಾನುಭವದಿಂದ ಬಲ್ಲವನಾಗಿದ್ದನು. ನಿರ್ಜೀವ ಸಂಗತಿಗಳನ್ನು ಮಕ್ಕಳ ಮನದಲ್ಲಿ ತುಂಬಲು ಆತನು ಇಷ್ಟಪಡಲಿಲ್ಲ. ಹಾಗೆ ಒತ್ತಾಯದಿಂದ ತುಂಬಿದರೂ ಅವರು ಬೇಗನೆ ಮರೆತುಬಿಡುವರು. ಆದುದರಿಂದ ಯಾವುದೇ ವಿಷಯವನ್ನು ಮಕ್ಕಳಲ್ಲಿ ಅಭಿರುಚಿಯುಂಟು ಮಾಡಿಯೇ ಕಲಿಸಬೇಕು. ಮಗು ತನಗೆ ಯಾವುದಾದರೊಂದು ವಿಷಯದಲ್ಲಿ ನಿಜವಾದ ಆಸಕ್ತಿ ತೋರಿದಾಗ ಅದರ ಕುರಿತು ಏನೇನು ತಿಳಿದುಕೊಳ್ಳಬೇಕೋ ಅವೆಲ್ಲವನ್ನೂ ಸ್ವತಃ ಕಂಡುಕೊಂಡು ನೆನಪಿನಲ್ಲಿಟ್ಟುಕೊಳ್ಳುವುದೆಂಬುದನ್ನು ರವೀಂದ್ರನು ಅರಿತಿದ್ದನು. ಮಗು ತನಗೆ ಇಷ್ಟವಾದ ಆಟದಲ್ಲಾಗಲಿ ಪ್ರೀತಿಯ ಉಪವೃತ್ತಿಯಲ್ಲಾಗಲಿ (Hobbies) ತನ್ನ ಅದ್ಭುತ ಶಕ್ತಿಉತ್ಸಾಹಗಳನ್ನು ಉಪಯೋಗಿಸುವನು. ರವೀಂದ್ರನು ಆಟಪಾಠಗಳೊಳಗಿದ್ದ ಕೃತಕ ಪ್ರಭೇದ ಗಳನ್ನು ಹೋಗಲಾಡಿಸಲು ಬಯಸಿದನು ಮತ್ತು ಮಕ್ಕಳು ತಮ್ಮ ಜೀವನದ ಎಲ್ಲ ಚಟುವಟಿಕೆಗಳಲ್ಲಿಯೂ ಅದೇ ಶಕ್ತ್ಯುತ್ಸಾಹ ಸಂತೋಷಗಳನ್ನು ಉಪ ಯೋಗಿಸುವಂತೆ ಪ್ರೋತ್ಸಾಹಿಸಿದನು.

'ಶಾಂತಿನಿಕೇತನವು ಮಂದಿರ ಮತ್ತು ದೇವಮಂದಿರಗಳ ಏಕರೂಪ' ವೆಂದು ರವೀಂದ್ರನು ಹೇಳುತಿದ್ದನು. ಪ್ರಕೃತಿಯೊಂದಿಗೆ ಮಕ್ಕಳಿಗಿದ್ದ ಸಂಬಂಧ ವನ್ನು ಕುರಿತು ಮಾತಾಡುತ್ತಾ ಅವನು 'ಈ ಜಗತ್ತಿನಲ್ಲಿ ಮಕ್ಕಳಿಗಾಗಿ ನಿಜವಾದ ಮನೆಯೊಂದನ್ನು ನಿರ್ಮಿಸಿದೆ' ಎನ್ನುತ್ತಾನೆ. ಮನೆಮಂದಿಯ ಹಿರಿಕಿರಿಯರೊಳ ಗಿರುವ ಆತ್ಮೀಯ ಪ್ರೇಮದ ವಾತಾವರಣವನ್ನೇ ತನ್ನ ಶಾಲೆಯಲ್ಲಿಯೂ ತರಲು

ಶಕ್ತಿವಿಹಾರಿ ಪ್ರಯತ್ನಿಸಿದನು. ಅಣ್ಣತಮ್ಮಂದಿರು ಆಡುವಂತೆ ಅಧ್ಯಾಪಕರೂ ವಿದ್ಯಾರ್ಥಿಗಳೂ ಒಟ್ಟಾಗಿ ಆಡುತ್ತಾ ಜೀವಿಸಿದರು. ಎಲ್ಲರಿಗಿಂತಲೂ ಅಧಿಕವಾದ ಪ್ರೇಮವನ್ನು ಬೀರುತ್ತಾ ರವೀಂದ್ರನೂ ಆಟದಲ್ಲಿ ಕಲೆಯುತಿದ್ದನು. ಅವನು ಮಹಾಪುರುಷನಾಗಿದ್ದುದರಿಂದ ಗಂಭೀರ ಸ್ವಭಾವದವನಾಗಿದ್ದನೆಂದು ತಿಳಿಯುವುದು ಶುದ್ಧ ತಪ್ಪು. ಶಾಲೆಯಲ್ಲಿರುವ ಪುಟ್ಟ ಹಾಗೂ ತುಂಟ ಹುಡುಗರಾಡುವ ಎಲ್ಲ ಬಗೆಯ ಐಂದ್ರಜಾಲಿಕ ಆಟಗಳಲ್ಲಿ ತಾನೂ ಸಂತೋಷದಿಂದ ಭಾಗವಹಿಸುತಿದ್ದನು! ಕೇವಲ ತಮಾಷೆಗಾಗಿ ಮತ್ತು ವ್ಯಾಯಾಮಕ್ಕಾಗಿ ಮಕ್ಕಳನ್ನು ತನ್ನ ಹಳೆಯ ವೀರರಂತೆ, ದರೋಡೆಖೋರರಂತೆ ಮರಗಾಲಲ್ಲಿ ನಡೆಯಲು ಹುರಿದುಂಬಿಸುತಿದ್ದನು. ಗೃಹಸ್ಥರಾಗಿದ್ದ ಅಧ್ಯಾಪಕರು ಮಕ್ಕಳನ್ನು ತಂತಮ್ಮ ಮನೆಗಳಿಗೆ ಬರಮಾಡುತಿದ್ದರು; ಅವರ ಪತ್ನಿಯರು ತಾಯಂತೆ ಮಕ್ಕಳನ್ನು ನೋಡಿಕೊಳ್ಳುತಿದ್ದರು. ಮಕ್ಕಳ ಸಂಖ್ಯೆ ಅಧಿಕವಾಗುತಿದ್ದರೂ ತರಗತಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಮಕ್ಕಳನ್ನು ಇಟ್ಟುಕೊಳ್ಳುತಿದ್ದಿಲ್ಲ. ಅಧ್ಯಾಪಕನು ಮಕ್ಕಳನ್ನು ಸಣ್ಣಸಣ್ಣ ಗುಂಪುಗಳಾಗಿ ಮಾಡಿ ವೈಯಕ್ತಿಕ ಲಕ್ಷ್ಯವಿಟ್ಟು ಕಲಿಸುತಿದ್ದನು. ಮಕ್ಕಳು ಪುಟ್ಟ ತಂಡಗಳಾಗಿ ಮರಗಳ ನೆರಳಲ್ಲಿ ಸ್ನೇಹಭಾವದಿಂದ ವೃತ್ತಾಕಾರವಾಗಿ ಕುಳಿತುಕೊಳ್ಳುತಿದ್ದರು; ಕೆಲವು ವೇಳೆ ಇಷ್ಟವಾದರೆ ಮರಗಳ ಮೇಲೇರಿ ಕುಳಿತೂ ಪಾಠಗಳನ್ನು ಕಲಿಯುತಿದ್ದರು. ಶಾಲೆಗಳಲ್ಲಿರುವ ತರಗತಿಯ ಕಟ್ಟುನಿಟ್ಟಾದ ನಿರ್ಬಂಧಗಳು ಈ ಸ್ನೇಹಪೂರ್ಣ ವಾತಾವರಣದಲ್ಲಿರಲಿಲ್ಲ. 'ನಾನೆಂದೂ ಅವರನ್ನು ಈ ಕೆಲಸ ಮಾಡಬೇಡಿರಿ, ಈ ಸ್ಥಳಕ್ಕೆ ಹೋಗಬೇಡಿರಿ ಎಂದು ಆಜ್ಞಾಪಿಸಲಿಲ್ಲ; ಮರವನ್ನು ಹತ್ತಬೇಡಿರೆಂದು ಹೇಳಿಲ್ಲ. ಅವರು ಸ್ವೇಚ್ಛೆಯಿಂದ, ಆನಂದದಿಂದ ಇರುವಂತೆ ಮಾತ್ರವೇ ನೋಡಿಕೊಳ್ಳುತಿದ್ದೆ' ಎಂದು ರವೀಂದ್ರನು ಹೇಳುತಿದ್ದನು. 'ಆದರೆ ಎಲ್ಲರೂ ತಮ್ಮ ಮನಬಂದಂತೆ ವರ್ತಿಸದೆ, ಇತರರ ಅಭಿಪ್ರಾಯಗಳನ್ನೂ ಅವಶ್ಯಕತೆಗಳನ್ನೂ ಮನ್ನಿಸುವುದರಲ್ಲೇ ನಿಜವಾದ ಸಾತಂತ್ರ್ಯವಿದೆ' ಎನ್ನುತಿದ್ದನು. ಜನರೆಲ್ಲ ಸುಖವಾಗಿ ಸುರಕ್ಷಿತವಾಗಿ ಸಾಗಿಹೋಗಲು ಕೆಲವೊಂದು ನಿಯಮಗಳನ್ನು ಪಾಲಿಸತಕ್ಕದ್ದೆಂದು ತೋರಿಸಿಕೊಟ್ಟನು. ಅದರಂತೆ ಮಕ್ಕಳು ತಮ್ಮ ನಿಯಮಗಳನ್ನು ತಾವೇ ನಿಶ್ಚೈಸಿಕೊಂಡರು. ಅವರಲ್ಲಿ ಕೆಲವರು ಸಂಘದ ನಾಯಕರಾದರು. ಈ ನಾಯಕರು ಆಶ್ರಮದ ನೈರ್ಮಲ್ಯ, ಶಿಸ್ತು, ಆಟ, ವಿನೋದಗೋಷ್ಠಿ, ಊಟೋಪಚಾರ, ಅತಿಥಿಸತ್ಕಾರ ಮುಂತಾದುವುಗಳನ್ನು ನೋಡಿಕೊಳ್ಳುತಿದ್ದರು. ಬಾಲಕನೊಬ್ಬನು ಈ ಸಾಂಘಿಕ ನಿಯಮೋಲ್ಲಂಘನೆ ಮಾಡಿದಾಗ ಆತನನ್ನು ಶಿಕ್ಷಿಸಬೇಕೇ ಬೇಡವೇ, ಶಿಕ್ಷಿ

ಸುವುದಾದರೆ ಎಂತಹ ಶಿಕ್ಷೆಯನ್ನು ವಿಧಿಸಬೇಕೆಂಬುದನ್ನು ಮಕ್ಕಳೇ ತೀರ್ಮಾನಿಸುತ್ತಿದ್ದರು.

ಈ ರೀತಿಯಲ್ಲಿ ಮಕ್ಕಳೇ ಬಾಧ್ಯತೆ ವಹಿಸಿ ಶಾಲೆಯನ್ನು ಕ್ರಮದಿಂದ ನಡೆಸುವ ಪದ್ಧತಿಯನ್ನು ಇಂಗ್ಲೆಂಡ್, ಅಮೇರಿಕಾ ದೇಶಗಳಲ್ಲಿ ರವೀಂದ್ರನು ನೋಡಿದ್ದನು. ಅಲ್ಲಿ ತುಂಟತನದಿಂದ ಸಂಕಟಕ್ಕೊಳಗಾದ ಮಕ್ಕಳಿಗಾಗಿ ಪ್ರತ್ಯೇಕ ಶಾಲೆಗಳಿದ್ದುವು. ಈ ತುಂಟ ಹುಡುಗರಿಗೆ ಶಾಲೆಯಲ್ಲಿ ತಮ್ಮ ಜವಾಬ್ದಾರಿಯನ್ನು ತಾವೇ ನೋಡಿಕೊಳ್ಳುವಂತೆ ಸ್ವಾತಂತ್ರ್ಯವನ್ನಿತ್ತಾಗ ಅವರು ಸನ್ಮಾರ್ಗಪ್ರವರ್ತಕರಾಗಿ ತಮ್ಮ ಜೀವನವನ್ನು ತಿದ್ದಿಕೊಳ್ಳುತ್ತಿದ್ದರು. ಈ ಪದ್ಧತಿಯನ್ನೇ ರವೀಂದ್ರನು ಶಾಂತಿನಿಕೇತನದಲ್ಲಿ ಅನುಸರಿಸಿ ಫಲಸಿದ್ಧಿಯನ್ನು ಹೊಂದಿದನು. ಹೆತ್ತವರು ಕೆಲವೊಮ್ಮೆ ಬಹಳ ಒರಟು ಸ್ವಭಾವದ ಮಕ್ಕಳನ್ನು ಶಾಂತಿನಿಕೇತನಕ್ಕೆ ಕಳುಹಿಸುತ್ತಿದ್ದರು. ಆದರೆ ಅಲ್ಲಿಯ ಪ್ರಶಾಂತ ವಾತಾವರಣದಲ್ಲಿ ಮಕ್ಕಳು ಸಾಧುಗಳಾಗುತ್ತಿದ್ದರು. ಅವರಿಂದಾಗಿ ರವೀಂದ್ರನಿಗೆ ಯಾವ ಸಂಕಷ್ಟವೂ ಸಂಭವಿಸುತ್ತಿರಲಿಲ್ಲ. ಹೀಗೆ ರವೀಂದ್ರನು ಪಾಶ್ಚಾತ್ಯ ಪದ್ಧತಿಗಳನ್ನೂ ಭಾರತದ ಪ್ರಾಚೀನ ಪದ್ಧತಿಗಳನ್ನೂ ಏಕೀಭವಿಸಿ, ನೂತನ ರೀತಿಯ ಭಾರತ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದನು.

ಶಾಂತಿನಿಕೇತನದ ಉತ್ತಮ ಶಿಕ್ಷಣದಿಂದಾಗಿ ಮಕ್ಕಳು ಸತ್ಯವನ್ನು ಪ್ರೀತಿಸಲು ಕಲಿತುಕೊಂಡರು. ಪ್ರಕೃತಿಯೊಂದಿಗೆ ಸಮರಸಗೊಂಡು ಸಂಗೀತ ಗೀತಗಳಿಂದಾವೃತರಾಗಿ ಭಾವ ಪ್ರಚೋದಿತರಾಗಿ ಸೌಂದರ್ಯವನ್ನು ಆರಾಧಿಸಲು ತೊಡಗಿದರು. ನಾಲ್ಕು ಮಂದಿಯೊಂದಿಗೆ ಕಲೆತು ಒಳಿತು ಕೆಡುಕುಗಳನ್ನು ಗ್ರಹಿಸಲು ಶಕ್ತರಾದರು. ರವೀಂದ್ರನು ತನ್ನ ತಂದೆಯ ಆಶ್ರಮದಲ್ಲಿ ಜೀವಹಿಂಸೆ ಮಾಡಬಾರದೆಂಬ ನಿಯಮವನ್ನು ಪಾಲಿಸುತ್ತ, ಮಕ್ಕಳು ಸಮಸ್ತ ಜೀವರಾಶಿಗಳಲ್ಲಿಯೂ ದಯೆ ಸಹಾನುಭೂತಿಗಳನ್ನು ತೋರುವಂತೆ ಮಾಡಿದನು. ಇತರ ಭಾಷೆಗಳನ್ನು, ಆಚಾರಗಳನ್ನು ಮತಗಳನ್ನು ಗೌರವಿಸಲೂ ಕಲಿಸಿದನು. ಇದರಿಂದಾಗಿ ಮುಂದೆ ಎಷ್ಟೋ ವಿದೇಶೀಯರು ಕೂಡ ಆಶ್ರಮದಲ್ಲಿ ಅಧ್ಯಾಪಕರಾಗಿ ಬಂದು ಸೇರಿದರು.

ರವೀಂದ್ರನು ನಿಕೇತನದಲ್ಲಿ ಮಕ್ಕಳಿಗೆ ಮತಬೋಧನೆಯನ್ನು ಮಾಡಲಿಲ್ಲ. ಮತವೆಂದರೆ ಕೇವಲ ಕೆಲವು ಚಾರಿತ್ರಿಕ ನಿಯಮಗಳನ್ನಷ್ಟೇ ತಿಳಿದುಕೊಳ್ಳುವುದಲ್ಲ; ಭಗವಂತನ ಸತ್ಯ ಸ್ವರೂಪವನ್ನು ಅರಿಯುವುದೇ! ಎಂಬುದು ಆತನ ಅಭಿಪ್ರಾಯ. ಆಶ್ರಮದ ಬಾಲಕರೆಲ್ಲ ಪ್ರತಿದಿನ ಮುಂಜಾನೆ ಸಂಜೆಗಳಲ್ಲಿ ಕಾಲು ಗಂಟೆ ಕಾಲ ಮೌನವಾಗಿ ಕುಳ್ಳಿರಲು ಕಲಿಸಿದನು. ಈ ಸಮಯದಲ್ಲಿ ರವೀಂದ್ರನು, ಏನನ್ನು ಯೋಚಿಸಬೇಕೆಂದಾಗಲಿ, ಆ ಮೇಲೆ ಯಾವುದನ್ನು

ಯೋಚಿಸುತಿದ್ದಿರಿ ಎಂದಾಗಲಿ ಪ್ರಶ್ನಿಸುತಿದ್ದಿಲ್ಲ. ಮೌನವಾಗಿದ್ದ ಮಾತ್ರಕ್ಕೆ ಅವರ ಮನಸ್ಸು ಆತ್ಮಗಳಿಗೆ ಶಾಂತಿದೊರಕಿ ಜ್ಞಾನೋದಯವಾಗಬಲ್ಲದು ಎಂದು ಆತನು ನಂಬಿದ್ದನು. ಪ್ರತಿದಿನ ಮೌನವನ್ನು ಪಾಲಿಸಿದ ತರುವಾಯ, ಮಕ್ಕಳೆಲ್ಲ ಒಂದೆಡೆ ಸೇರಿ ಪ್ರಾರ್ಥನೆಮಾಡುವರು. ಆ ಪ್ರಾರ್ಥನಾಗೀತಗಳು ರವೀಂದ್ರನಿಂದಲೇ ರಚಿತವಾದುವು. ಅವುಗಳ ಅರ್ಥವನ್ನು ಮಕ್ಕಳಿಗೆ ಮನದಟ್ಟು ಮಾಡಿದ್ದನು. ಆ ಪ್ರಾರ್ಥನಾ ಪದ್ಯಭಾಗವೊಂದರ ಭಾವ ಹೀಗಿದೆ:—

'ನೀನೇ ನಮ್ಮ ತಂದೆ; ನೀನೇ ನಮ್ಮ ತಂದೆಯೆಂಬುದನು ನಾವರಿವಂತೆ ಸಹಕರಿಸು.
ಓ ನಮ್ಮ ತಂದೆಯಾಗಿಹ ದೇವನೇ! ಪಾಪವನು ಹೋಗಾಡಿ ಪುಣ್ಯವನನುಗ್ರಹಿಸು.
ನಿನ್ನಿಂದಲೇ ಜೀವನಾವೋದ ಬರುತಿಹುದು, ನಿನ್ನಿಂದಲೇ ಮಾನವನ ಸೌಖ್ಯ ಲಭಿಸಿಹುದು.
ನಿನಗೆ ನಾ ಬಾಗುವೆನು. ನೀನೇ ಪುಣ್ಯರೂಪ, ಸರ್ವೋತ್ತಮನು ನೀನೇ.'

ಈ ಪ್ರಾರ್ಥನೆಯಲ್ಲಿ ಎಲ್ಲಾ ಮತದವರೂ ಭಾಗಿಗಳಾಗಬಹುದು.

ಶಾಂತಿನಿಕೇತನದಲ್ಲಿ ಕೆಲಸಮಾಡುವುದೆಂದರೆ ರವೀಂದ್ರನಿಗೆ ಮಿತಿಮೀರಿದ ಸಂತೋಷ ಹಾಗೂ ತೃಪ್ತಿ. ಆದರೆ ಇದರ ಆರಂಭದ ಕೆಲವು ವರ್ಷಗಳಲ್ಲಿ ಆತನು ನಾನಾ ಸಂಕಷ್ಟಗಳನ್ನು ಅನುಭವಿಸಬೇಕಾಗಿತ್ತು. ಮುಖ್ಯವಾಗಿ ಆರ್ಥಿಕ ಮುಗ್ಗಟ್ಟು ಅಧಿಕವಾಗಿತ್ತು. ಅವನು ವಿದ್ಯಾರ್ಥಿಗಳಿಂದ ಆಶ್ರಮಾರಂಭದಲ್ಲಿ ಸಂಬಳವನ್ನು ವಸೂಲುಮಾಡಲಿಲ್ಲ. ಈ ಮುಗ್ಗಟ್ಟಿನ ಕಾಲದಲ್ಲಿ ಆತನ ಧರ್ಮಪತ್ನಿ ತನ್ನ ಚಿನ್ನಾಭರಣಗಳನ್ನು ಮಾರಿ ಸಹಾಯ ಮಾಡಿದಳು. ಆದರೆ ಎಲ್ಲಕ್ಕಿಂತಲೂ ಅಧಿಕವಾದ ವಿಪತ್ಪರಂಪರೆಯನ್ನು ಆತನು ಎದುರಿಸಬೇಕಾಗಿ ಬಂತು. 1902ರಲ್ಲಿ ಆತನ ಪ್ರಿಯ ಪತ್ನಿ ರೋಗ ಪೀಡಿತಳಾಗಿ ದೈವಾಧೀನಳಾದಳು. ಆಕೆಯ ವಿಯೋಗವನ್ನು ಕುರಿತು ರವೀಂದ್ರನು ರಚಿಸಿದ 'ಸ್ಮರಣ'ವೆಂಬ ಕವನದಲ್ಲಿ ತನ್ನ ಅಸಹನೀಯ ವೇದನೆಯನ್ನು ವ್ಯಕ್ತಪಡಿಸಿದನು:

'ಆಕೆ ಬದುಕಿದ್ದಾಗ ನನಗಿತ್ತ ಕಾಣಿಕೆಯ
ಮರಳಿ ಸಲ್ಲಿಸೆ ದೇವ! ಬಯಸುತಿರುವೆ.
ಅಂದಿನಾ ಸುಖದಿನವು ಮುಂದೆಂದು ಬರುವುದೇ?
ಅವಳ ಬಾಳುವೆಯಿರುಳು ಉದಯವಾಯ್ತೆಂದು.'

ಕೆಲವು ದಿನಗಳ ತರುವಾಯ, ಅವನ ಮಗಳಾದ ರೇಣುಕೆಯೂ ರೋಗ ಗ್ರಸ್ತಳಾದಳು. ರವೀಂದ್ರನು ಆಕೆಯನ್ನು ಉಳಿಸಿಕೊಳ್ಳಲು ಅಲ್ಮೋರಾಕ್ಕೆ ಕರೆದೊಯ್ದನು. ಅಲ್ಲಿದ್ದಾಗಲೇ ತಾಯನ್ನಗಲಿದ ಮಕ್ಕಳನ್ನು ಸಮಾಧಾನ ಪಡಿಸಿ ವಿನೋದಗೊಳಿಸಲು ರಚಿಸಿದ ಸುಂದರ ಕವನಗಳನ್ನು 'ಬಾಲಚಂದ್ರ'ದಲ್ಲಿ ಕಾಣಬಹುದು.

ಆದರೇನು? ಆತನ ಪ್ರೇಮ, ಶ್ರದ್ಧೆ, ಫಲಿಸಲಿಲ್ಲ; ರೇಣುಕೆಯ ರೋಗ ಗುಣವಾಗಲಿಲ್ಲ. 1903ರಲ್ಲಿ ಆಕೆ ಮೃತ್ಯುವಶಳಾದಳು. ಇದಾದ ಒಂದು ವರ್ಷದೊಳಗೆ ರವೀಂದ್ರನ ಪ್ರಿಯ ಮಿತ್ರನಾಗಿದ್ದ ಸತೀಶಚಂದ್ರನು ಸಿಡುಬು ರೋಗಕ್ಕೆ ಬಲಿಬಿದ್ದು ಕಾಲವಾದನು. ಈತನು ಕವಿಯಾಗಿ ನಿಕೇತನದಲ್ಲಿ ರವೀಂದ್ರನ ಬಲಗೈಯಂತಿದ್ದನು. ಉತ್ತಮ ಕವಿಯೂ ಶಿಕ್ಷಕನೂ ಆಗಬಲ್ಲನೆಂದು ನಂಬಿ ಪುತ್ರವಾತ್ಸಲ್ಯದಿಂದ ನೋಡುತಿದ್ದ ರವೀಂದ್ರನ ಆಶಾಜ್ಯೋತಿಯು ನಂದಿ ಹೋಯಿತು. ಆ ಮೇಲೆ 1905ರಲ್ಲಿ ಮಹರ್ಷಿ ದೇವೇಂದ್ರನಾಥನು ತನ್ನ ಎಂಬತ್ತೆಂಟನೆಯ ವಯಸ್ಸಿನಲ್ಲಿ ಸ್ವರ್ಗಸ್ಥನಾದನು. 1907ರಲ್ಲಿ ರವೀಂದ್ರನ ಹದಿಮೂರು ವರ್ಷ ಪ್ರಾಯದ ಪ್ರೀತಿಯ ಕಿರಿಯ ಮಗ ಸಮೀಂದ್ರನು ಕೊಲೆರಾ ಪೀಡಿತನಾಗಿ ಕಾಲವಾದನು. ಈ ಸಂಕಷ್ಟಗಳನ್ನೆಲ್ಲ ಅನುಭವಿಸ ಬೇಕಾಗಿ ಬಂದರೂ ರವೀಂದ್ರನು ಧೃತಿಗೆಡದೆ ನಿರಂತರ ಶ್ರಮಿಸಿದನು, ಮಾತ್ರವಲ್ಲ ಜಗತ್ತಿನ ಒಳ್ಳಿತಲ್ಲಿ ಅಚಲ ವಿಶ್ವಾಸವಿದ್ದವನಾಗಿದ್ದನು.

## ಅಧ್ಯಾಯ ೭.

## ಕವಿಯೂ ರಾಜಕಾರ್ಯವೂ

ಶಾಂತಿನಿಕೇತನವನ್ನು ಸ್ಥಾಪಿಸುವುದಕ್ಕಿಂತ ಪೂರ್ವದಲ್ಲಿ ಕೆಲವು ಕಾಲ ರವೀಂದ್ರನು ದೇಶಸೇವಾ ಕಾರ್ಯದಲ್ಲಿ ನಿರತನಾಗಿದ್ದನು. ಪ್ರಜೆಗಳು ಸ್ವದೇಶೀ ವಸ್ತುಗಳನ್ನೇ ಕೊಂಡುಕೊಳ್ಳಬೇಕೆಂದೂ ಇದರಿಂದ ಸ್ವದೇಶೀ ವ್ಯಾಪಾರ ಪರಿಶ್ರಮಗಳು ಭಾರತೀಯರ ವಶದಲ್ಲೇ ಇರುವುವೆಂದೂ ಆತನು ನಂಬಿದ್ದನು. ಅವನ ಅಳಿಯಂದಿರಿಬ್ಬರು ಕಷ್ಟಿಯಾದಲ್ಲಿ ಗೋಣಿನಾರಿನ (jute) ಕಾರ್ಖಾನೆ ಯನ್ನೂ ಕಬ್ಬಿನ ರಸವನ್ನು ಹಿಂಡುವ ಯಂತ್ರವನ್ನೂ ಸ್ಥಾಪಿಸಿದರು. ಮಿತ್ರರಲ್ಲಿ ಕೆಲವರು ಕಲ್ಕತ್ತಾದಲ್ಲಿ 'ಭಂಡಾರ'ವೆಂಬ ಬಂಡಸಾಲೆಯನ್ನು ತೆರೆದರು. ರವೀಂದ್ರನು ಈ ಸ್ವದೇಶ ವ್ಯಾಪಾರವನ್ನು ಪ್ರೋತ್ಸಾಹಿಸಿದನಲ್ಲದೆ ತಾನೂ

ಇದರಲ್ಲಿ ಭಾಗಿಯಾದನು. ಆದರೆ ದುರದೃಷ್ಟವಶಾತ್ ಕಾರ್ಖಾನೆಗಳಾಗಲಿ ಬಂಡಸಾಲೆಯಾಗಲಿ ಜಯಪ್ರದವಾಗಲಿಲ್ಲ. ಕೆಲವು ವರ್ಷಾನಂತರ ಅವುಗಳನ್ನು ಮುಚ್ಚಬೇಕಾಯಿತು. ಇದರಿಂದಾಗಿ ರವೀಂದ್ರನಿಗೆ ತುಂಬ ಸಾಲವಾಯಿತು. ಶಾಂತಿನಿಕೇತನವನ್ನು ಸ್ಥಾಪಿಸುವ ಕಾಲದಲ್ಲಿ ಆರ್ಥಿಕ ಅಡಚಣೆಯುಂಟಾಗಲು ಇದೇ ಕಾರಣವಾಯಿತು.

1899ರಲ್ಲಿ ಕಲ್ಕತ್ತದಲ್ಲಿ ಪ್ಲೇಗು ರೋಗ ವ್ಯಾಪಿಸಿದಾಗ ರವೀಂದ್ರನು ಜನರಿಗಾಗಿ ಬಹಳ ಶ್ರಮಿಸಿದನು. ಸಹಾಯಧನವನ್ನು ಸಂಗ್ರಹಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿ ಸೇವಾಸಂಘಗಳನ್ನು ಸ್ಥಾಪಿಸಿದನು. ತನ್ನ ಜೀವಮಾನವೆಲ್ಲ ಸಂಕಟವನ್ನು ದೂರೀಕರಿಸಲು ಟೊಂಕಕಟ್ಟಿದನು. ಬಂಗಾಳದಲ್ಲಿ ನೆರೆಹಾವಳಿ, ಕ್ಷಾಮಡಾಮರಗಳು ತಲೆದೋರಿದಾಗಲೆಲ್ಲ ಬಡರೈತರ ಮೇಲೆ ಸಹಾನುಭೂತಿ ತೋರಿ ತನ್ನ ಕೈಲಾದ ಸೇವೆ ಸಲ್ಲಿಸಿದನು. ಇದರಂತೆಯೇ ಬಿಹಾರ್ ಕ್ವೆಟ್ಟಾಗಳಲ್ಲಿ ಭೀಕರ ಭೂಕಂಪವಾದಾಗಲೂ ಉದಾರ ಸಹಾಯ ಮಾಡಿದನು. ತನ್ನ ಘನ ಸ್ಫೂರ್ತಿಯನ್ನೂ ಅನುಭವವನ್ನೂ ಸದಾ ಮಾನವನ ಸೇವೆಗಾಗಿ ವಿನಿಯೋಗಿಸಿದನು.

1905ರಲ್ಲಿ ರವೀಂದ್ರನು 'ಭಂಡಾರ್' ಎಂಬ ಹೊಸ ಪತ್ರಿಕೆಯೊಂದನ್ನು ಹೊರಡಿಸಿದನು. ಇದರಲ್ಲಿ ರಾಜಕೀಯ ಹಾಗೂ ಆರ್ಥಿಕ ವಿಚಾರಗಳು ಚರ್ಚಿಸಲ್ಪಡುತಿದ್ದುವು. ಇದರ ಒಂದು ಲೇಖನದಲ್ಲಿ ಬ್ರಿಟಿಷರ ಆಳ್ವಿಕೆಯು ವಿದೇಶೀಯ ವ್ಯಾಪಾರವನ್ನು ಪ್ರೋತ್ಸಾಹಿಸುವುದಲ್ಲದೆ ಭಾರತೀಯರಿಗೇನೂ ಲಾಭದಾಯಕವಾಗಿಲ್ಲವೆಂದು ಬರೆದಿರುವನು. ಇದಲ್ಲದೆ ಇನ್ನೆಷ್ಟೋ ಲೇಖನಗಳಲ್ಲಿ ಸ್ವದೇಶ ಸಂಸ್ಥಾನಾಧಿಪತಿಗಳು ಭಾರತೀಯ ಕೈಗಾರಿಕೆಗಳನ್ನೂ ಕುಶಲ ಕಲೆಗಳನ್ನೂ ಅಭಿವೃದ್ಧಿಗೊಳಿಸತಕ್ಕದೆಂದೂ ಸೂಚಿಸಿರುವನು. ಇವುಗಳಿಂದ ರವೀಂದ್ರನ ಅತುಲ ದೇಶಭಕ್ತಿ, ಸೂಕ್ಷ್ಮದೃಷ್ಟಿ, ವ್ಯಕ್ತವಾಗುವುದು.

1905ರಲ್ಲಿ 'ಕರ್ಜನ್'ದೊರೆ' ಬಂಗಾಳವನ್ನು ಪೂರ್ವಬಂಗಾಳ—ಪಶ್ಚಿಮ ಬಂಗಾಳವೆಂದು ಇಬ್ಭಾಗಮಾಡಲು ತೊಡಗಿದಾಗ ಜನರೆಲ್ಲ ಆಕ್ರೋಶಗೊಂಡರು. ಈ 'ಬಂಗಾಳ ವಿಭಜನೆ'ಯನ್ನು ಪ್ರಜೆಗಳು ತೀವ್ರವಾಗಿ ವಿರೋಧಿಸಿದರು. ಪ್ರಜಾಭಿಪ್ರಾಯವನ್ನು ಮನ್ನಿಸದೆ ಸರಕಾರವು ಅಪಮಾನವನ್ನುಂಟುಮಾಡಿತೆಂದು ಪ್ರತಿಯೊಬ್ಬ ಬಂಗಾಳಿಯೂ ಭಾವಿಸಿದನು. ಬಂಗಾಳದ ಆದ್ಯಂತ ಪ್ರಭುತ್ವದ ವರ್ತನೆಯನ್ನು ಖಂಡಿಸುವ ಸಭೆಗಳು ಜರಗಿದುವು. ಬಂಗಾಳವು ಅವಿಭಾಜ್ಯವೆಂದೂ ಏಕಮೇವ ಬಂಗಾಳವಾಗಬೇಕೆಂದೂ ಆಂದೋಲನವಾಯಿತು. ರವೀಂದ್ರನು ಈ ಉದ್ಯಮದಲ್ಲಿ ನಾಯಕನಾದನು. ಕಲ್ಕತ್ತದ ಅನೇಕ ಸಭೆ

ಗಳಲ್ಲಿ ವೀರಾವೇಷದಿಂದ ಮಾತಾಡಿದನು. ಉದ್ರೇಕಪೂರ್ಣವಾದ ಗೀತಗಳನ್ನು ರಚಿಸಿದನು. ಜನರು ಆತನ ಮಾತುಗಳನ್ನು ಆವೇಶದಿಂದ ಕೇಳುತಿದ್ದರು. ಪದ್ಯಗಳನ್ನು ಬರೆದೊಡನೆ ಜನರು ಕಂಠಪಾಠಮಾಡಿ ಗುಂಪಾಗಿ ಹಾಡುತ್ತಾ ಕಾಳ್ಕಿಚ್ಚಿನಂತೆ ದೇಶದಲ್ಲೆಲ್ಲ ಸಂಚರಿಸಿದರು. ರವೀಂದ್ರನ ನೇತೃತ್ವದಲ್ಲಿ ಆತನು ಬರೆದ ದೇಶಪ್ರೇಮದ ಗೀತಗಳನ್ನು ಹಾಡುತ್ತಾ ಕಲ್ಕತ್ತದ ಬೀದಿಬೀದಿಗಳಲ್ಲಿ ದೊಡ್ಡ ಮೆರವಣಿಗೆ ನಡೆಯಿತು. ಆ ಹಾಡು ಪ್ರಭುತ್ವವನ್ನು ಹೀಗೆ ಎಚ್ಚರಿಸಿತು:

'ವಿಧಿಯೊಂದಾಗಿಸಿದೆಮ್ಮಯ ಬಂಧವ
ಮುರಿಯಲು ನಿನಗೆಂಟೆದೆಯೇ?'

ಒಂದು ಮಹಾ ಸಭೆಯಲ್ಲಿ ಒಮ್ಮೆಗೇ ರವೀಂದ್ರನು 50,000 ರೂಪಾಯಿ ಗಳನ್ನು ಸಂಗ್ರಹಿಸಿದನು. ಈ ನಿಧಿಯನ್ನು ವಿಭಜನೆಯ ಹೋರಾಟದ ಸಲುವಾಗಿ ವಿನಿಯೋಗಿಸಿದನು. 'ಹೋರಾಡುವುದಾದರೂ ಹೇಗೆ? ಅಸಹಕಾರದಿಂದಲೇ!'— ರವೀಂದ್ರನು ಉತ್ತರಿಸಿದನು. ಆದರೆ ಅಸಹಕಾರವು ವಿನಾಶಕಾರಿಯಾಗಿರ ಬಾರದು. ಸರಕಾರದೊಂದಿಗೆ ಯಾವ ವಿಷಯದಲ್ಲಿಯೂ ಸಹಕರಿಸದೆ ಐಕ್ಯ ಬಂಗಾಳಕ್ಕಾಗಿ ಪ್ರತ್ಯೇಕ ಹೆಣಗಾಡಬೇಕು. ಸಂಘವನ್ನು ನಿರ್ಮಿಸಿ ನ್ಯಾಯಾ ಚರಣೆ ಸೋದರಭಾವಗಳನ್ನು ನೆಲೆಗೊಳಿಸಬೇಕು. ಹೀಗಲ್ಲದೆ ವಿನಾಶಕಾರಕ ಕೃತ್ಯಗಳನ್ನು ಮಾಡಕೂಡದು. ಸರಕಾರವು, ವಿದ್ಯಾರ್ಥಿಗಳು ರಾಜಕೀಯ ಸಭೆಗಳಲ್ಲಿ ಭಾಗವಹಿಸಕೂಡದೆಂದು ನಿಷೇಧಿಸಿದಾಗ ರವೀಂದ್ರನು ಅದನ್ನು ಬಲ ವಾಗಿ ಪ್ರತಿಭಟಿಸಿದನು.

ಉದ್ರೇಕಗೊಂಡ ಬಂಗಾಳೀ ಯುವಕರು ರವೀಂದ್ರನ ಶಾಂತಿವಚನ ಗಳನ್ನು ಕೇಳಲಿಲ್ಲ. ಸಂಘಜೀವನವನ್ನು ಬಲಪಡಿಸಿ ಆತ್ಮಗೌರವವನ್ನೂ ಆತ್ಮ ಶಕ್ತಿಯನ್ನೂ ಅಭಿವೃದ್ಧಿಗೊಳಿಸಲು ಬಹಳ ಕಾಲ ಹಿಡಿಯುವುದು. ಅದಕ್ಕಿಂತಲೂ ಸರಕಾರೋದ್ಯೋಗಿಗಳ ಮೇಲೆ ದಾರುಣವಾದ ದಾಳಿಮಾಡುವುದರಿಂದ ಸುಲಭವಾಗಿ ತಮ್ಮ ಉದ್ದೇಶವನ್ನು ಸಿದ್ಧಿಸಿಕೊಳ್ಳಬಹುದೆಂದು ಬಗೆದರು. ಆದರೆ ಇಂತಹ ಹಿಂಸಾತ್ಮಕ ಕೃತ್ಯದಿಂದ ಲಭಿಸಿದ ಸ್ವರಾಜ್ಯವು ಫಲದಾಯಕವಾಗು ವುದೇ? ಪ್ರಜೆಗಳಿಗೆಲ್ಲ ಹೆಚ್ಚಿನ ಸೌಕರ್ಯವು ಲಭಿಸುವುದೇ ಎಂಬುದನ್ನು ಅವರು ಆಲೋಚಿಸಲಿಲ್ಲ. ಕ್ರಮಕ್ರಮವಾಗಿ ಚಳವಳವು ಸಂಕುಚಿತಮಾರ್ಗವನ್ನು ಅನುಸರಿಸಿ ತಪ್ಪುದಾರಿಯಲ್ಲಿ ಮುನ್ನಡೆಯಿತು. ಆದುದರಿಂದಲೇ ರವೀಂದ್ರನು ರಾಜಕೀಯದಿಂದ ನಿವೃತ್ತನಾಗಿ ಶಾಂತಿನಿಕೇತನವನ್ನು ತಿರುಗಿ ಸೇರಿದನು. ಪ್ರಜೆಗಳು ಆತನನ್ನು ಅರ್ಥಮಾಡಿಕೊಳ್ಳಲಿಲ್ಲ. ವಿಶ್ವಾಸಘಾತಕನೆಂದೂ ದೇಶ

ದ್ರೋಹಿಯೆಂದೂ ನಿಂದಿಸಿದರು. ಆದರೆ ರವೀಂದ್ರನು ಇದೊಂದನ್ನೂ ಲಕ್ಷಿಸಲಿಲ್ಲ. ಮಹಾತ್ಮರು ಪ್ರಜೆಗಳಿಂದ ಹೊಗಳಿಸಿಕೊಳ್ಳುವುದಕ್ಕಾಗಿ ತಮ್ಮ ಅಭಿಪ್ರಾಯಗಳನ್ನು ಎಂದೂ ಬದಲಾಯಿಸರು. ತಾನು ಸತ್ಯವೆಂದೂ ನ್ಯಾಯವೆಂದೂ ಭಾವಿಸಿದ ಮಾರ್ಗವನ್ನೇ ಅನುಸರಿಸುವುದರಲ್ಲಿ ಶ್ರೇಯಸ್ಸಿದೆ ಎಂಬುದನ್ನು ರವೀಂದ್ರನು ಅರಿತಿದ್ದನು. ಇದೇ ತತ್ವವನ್ನು ಶಾಂತಿನಿಕೇತನದಲ್ಲಿಯೂ ಗ್ರಾಮಗಳಲ್ಲಿಯೂ ಅನುಸರಿಸಿದನು.

ಬಂಗಾಳದ ರಾಜಕೀಯದಲ್ಲಿ ಹಿಂದೂ-ಮುಸ್ಲಿಮ್ ಸಂಘಗಳು ಸ್ಥಾಪಿತವಾದುವು. ಇದು ರವೀಂದ್ರನಿಗೆ ಬಹಳ ನೋವನ್ನುಂಟುಮಾಡಿತು. 1908ರಲ್ಲಿ ರವೀಂದ್ರನು ಬಂಗಾಳದ ಪ್ರಾಂತೀಯ ಸಭೆಗೆ ಅಧ್ಯಕ್ಷನಾಗಿ ಆ ಸಭೆಯಲ್ಲಿ ಮಾತನಾಡಿದನು. ಆಗ ಈ ಮತಭೇದದಿಂದಾಗಿ ಉಂಟಾಗತಕ್ಕ ಅನರ್ಥಗಳನ್ನು ವಿವರಿಸಿದನು. 'ಯುವಕರೆಲ್ಲ ಸಣ್ಣ ಸಣ್ಣ ತಂಡಗಳಾಗಿ ಹಳ್ಳಿಗಳಿಗೆ ಹೋಗಿ ಹಿಂದೂ ಮುಸ್ಲಿಮ್ ಐಕ್ಯತೆ ಸೋದರಭಾವಗಳ ಅಭಿವೃದ್ಧಿಗಾಗಿ ದುಡಿಯಬೇಕು. ಮತವು ಯಾವುದೇ ಇರಲಿ, ಮಾನವರೆಲ್ಲರ ಅಭಿರುಚಿ ಒಂದೇ. ಈ ರೀತಿಯಲ್ಲಿ ಎಲ್ಲಾ ಮತದವರೂ ಒಕ್ಕಟ್ಟಿನಿಂದ ಬಾಳುವುದು ನ್ಯಾಯವೂ ಧರ್ಮವೂ ಆಗಿದೆ. ಇದು ಕೇವಲ ರಾಜಕೀಯ ಚಳವಳಕ್ಕಾಗಿ ಮಾತ್ರವೇ ಅಲ್ಲ.'

ರವೀಂದ್ರನು ಹಿಂದೂಮತದವನಾದುದರಿಂದಲೇ ಹಿಂದುಗಳಿಗೆ ಮುಸ್ಲಿಮರಲ್ಲಿ ಇರತಕ್ಕ ಬಾಧ್ಯತೆಗಳನ್ನು ಹೆಚ್ಚಾಗಿ ವಿವರಿಸಿದನು. ಮುಸ್ಲಿಮರಿಂದ ಭಾರತಕ್ಕೆ ಲಭಿಸಿದ ಲಾಭವನ್ನು ಅರಿತುಕೊಳ್ಳಬೇಕೆಂದು ನಿವೇದಿಸಿಕೊಂಡನು. 'ವಿದೇಶದಿಂದ ಬಂದ ಮುಸ್ಲಿಮರು ತಮ್ಮ ತಿಳುವಳಿಕೆಯನ್ನೂ ಅನುಭವವನ್ನೂ ಭಾರತಕ್ಕೆ ಕಾಣಿಕೆ ಇತ್ತರು. ನಮ್ಮ ಸಂಗೀತ, ಶಿಲ್ಪ, ಚಿತ್ರಲೇಖನ, ಸಾಹಿತ್ಯವೇ ಮೊದಲಾದುವುಗಳಿಗೆ ತಮ್ಮ ಅಮೂಲ್ಯ ಕಾಣಿಕೆಯನ್ನು ಸಲ್ಲಿಸಿದರು. ಅವರಲ್ಲಿ ಉತ್ತಮ ತತ್ವಜ್ಞರೂ ಮತಪ್ರವರ್ತಕರೂ ಇದ್ದರು. ಹೀಗಿದ್ದೂ ಹಿಂದುಗಳು ಅವರನ್ನು ವಿದೇಶೀಯರೆಂದೇ ಕಾಣುತಿದ್ದರು. ನಾವು ಅನ್ಯೋನ್ಯ ಗೌರವಿಸಿಕೊಳ್ಳಲಿಲ್ಲ; ಅರ್ಥಮಾಡಿಕೊಳ್ಳಲಿಲ್ಲ,'—ಎಂದು ರವೀಂದ್ರನು ಸಾರಿದನು.

ಆದರೆ ಹಿಂದೂಮುಸ್ಲಿಮ್ ಐಕ್ಯತೆಗಾಗಿ ದುಡಿಯುವವರಿಗೆ, ತಮ್ಮೊಳಗೆ ಭೇದವಿಲ್ಲವೆಂದು ನಟಿಸುವುದರಿಂದ ಪ್ರಯೋಜನವಿಲ್ಲವೆಂದು ಎಚ್ಚರಿಸಿದನು. ಗೋಡೆಯ ಬಿರುಕಿಗೆ ಬಣ್ಣಬಳಿದು ಗೋಡೆಯು ಭದ್ರವಾಗಿದೆ ಎಂದು ನಟಿಸುವುದರಿಂದೇನು? ಹೀಗೆಯೇ ಹಿಂದೂಮುಸ್ಲಿಮರೊಳಗಿರುವ ಸಹಜ ವ್ಯತ್ಯಾಸಗಳನ್ನು ಗೌರವಪೂರ್ವಕ ಅರಿತುಕೊಳ್ಳತಕ್ಕದ್ದು. ತಾರತಮ್ಯಗಳಿದ್ದರೂ ಅವು

ಗಳನ್ನು ಸಹಿಸಿಕೊಂಡು ಒಂದಾಗಿ ಬಾಳುವುದು ಶ್ರೇಯಸ್ಕರ. ರಾಜಕೀಯದಲ್ಲಿ ತನ್ನ ಅಭಿಪ್ರಾಯವೇ ಪರಿಪೂರ್ಣ ಸತ್ಯವೆಂದು ಸಾಧಿಸ ಹೊರಟರೆ ಮೋಸ ಹೋಗುವುದು ಸಹಜ. ರವೀಂದ್ರನು ಈ ರೀತಿ ಎಂದೂ ನಡೆಯಲಿಲ್ಲ. ಪ್ರತಿಯೊಂದು ವಿಷಯವನ್ನೂ ಚೆನ್ನಾಗಿ ಆಲೋಚಿಸಿ ಸಂಪೂರ್ಣ ಸತ್ಯವನ್ನೇ ಅನುಸರಿಸುತಿದ್ದನು. ಪ್ರಸಿದ್ಧ ಆಂಗ್ಲಕವಿ ಆರ್ನಾಲ್ಡ್, ಗ್ರೀಕ್ ಕವಿ ಸೊಫೊಕ್ಲಿಸ್‌ರನ್ನು ಕುರಿತು ಆಡಿದ ಮಾತುಗಳು ರವೀಂದ್ರನಿಗೂ ಅನ್ವಯಿಸುವುವು:—

'ಆತನು ಜೀವನವನ್ನು ಸುಸ್ಥಿರವಾಗಿಯೂ ಸಮಗ್ರವಾಗಿಯೂ ಕಂಡನು.'

## ಅಧ್ಯಾಯ ೮.

## ಲೋಕ ವಿಖ್ಯಾತಿ

**1908**ರಿಂದ ಮೊದಲ್ಗೊಂಡು ರವೀಂದ್ರನು ಕೆಲವು ಅನರ್ಘ್ಯ ಕೃತಿಗಳನ್ನು ರಚಿಸಿದನು. ಬಂಗಾಳಿಯಲ್ಲಿ 'ಗೀತಾಂಜಲಿ' ಕವನಗಳನ್ನು ರಚಿಸಿದ ತರುವಾಯ ಅವನ್ನು ಆಂಗ್ಲಭಾಷೆಗೆ ಪರಿವರ್ತಿಸಿದನು. ಶಾಂತಿನಿಕೇತನದ ವಿದ್ಯಾರ್ಥಿಗಳಿಗಾಗಿ 'ಶರದೋತ್ಸವ,' 'ಪ್ರಾಯಶ್ಚಿತ್ತ' ಸಂಗೀತ ನಾಟಕಗಳನ್ನು ಬರೆದನು. 'ಪ್ರಾಯಶ್ಚಿತ್ತ'ದಲ್ಲಿನ ಮುಖ್ಯ ಪಾತ್ರವು ಧನಂಜಯ. ಈತನು ಶಿವಭಕ್ತ, ಸಾಧು. ಪ್ರಾಚೀನ ಬಂಗಾಳ ಯೋಗಿಗಳಂತೆ ಸರಳವಾದ ಭಕ್ತಿಗೀತಗಳನ್ನು ಹಾಡುತಾ ಪ್ರಚಾರಮಾಡುವನು. ಧನಂಜಯನು ಅಹಿಂಸಾ ಮೂರ್ತಿ. ಆಗ ಮಹಾತ್ಮಾ ಗಾಂಧಿಯವರ ಅಹಿಂಸಾ ಬೋಧೆ ಇನ್ನೂ ಪ್ರಚಾರವಾಗಿರಲಿಲ್ಲ. ಧನಂಜಯನ ಮಾತುಗಳಿಗೂ ಮಹಾತ್ಮರು ಸಾರಿದ ಅಹಿಂಸಾ ಧರ್ಮಕ್ಕೂ ಬಹಳ ಸಾಮ್ಯವಿದೆ. 1910ರಲ್ಲಿ ಈ ನಾಟಕವನ್ನು ಶಾಂತಿನಿಕೇತನದಲ್ಲಿ ಮೊದಲಬಾರಿ ಪ್ರದರ್ಶಿಸಿದಾಗ ರವೀಂದ್ರನೇ ಧನಂಜಯನ ಪಾತ್ರ ವಹಿಸಿದನು. ಆತನು ಉದ್ದೇಶಿಸಿದಂತೆ ಇಂತಹ ನಾಟಕಗಳಿಂದ ವಿದ್ಯಾರ್ಥಿಗಳು ಪ್ರತ್ಯೇಕ ಬೋಧನೆಯಿಲ್ಲದೆಯೇ ಜೀವನ ಪಾಠವನ್ನು ಕಲಿತರು. ರವೀಂದ್ರನು ಈ ಸಮಯದಲ್ಲಿಯೇ 'ನನ್ನ ನೆನಹುಗಳು' (Reminiscences) ಎಂಬ ಗ್ರಂಥವನ್ನು ರಚಿಸಿ ಬಂಗಾಳೀ ಮಾಸಪತ್ರಿಕೆಯಲ್ಲಿ ಪ್ರಕಟಿಸಿದನು.

1911ರಲ್ಲಿ ರವೀಂದ್ರನ 50ನೆಯ ಜನ್ಮದಿನೋತ್ಸವವು ಶಾಂತಿನಿಕೇತನದಲ್ಲಿ ಬಹಳ ಸಂಭ್ರಮದಿಂದ ನೆರವೇರಿತು. ಮುಂಜಾನೆ ಮಕ್ಕಳೆಲ್ಲ ಮಂದಿರದಲ್ಲಿ ವಿಶೇಷ ಪ್ರಾರ್ಥನೆಗಳನ್ನು ನಡೆಸಿದರು. ಸಂಜೆ 'ರಾಜಾ' ಎಂಬ ನಾಟಕವನ್ನು

ಅಭಿನಯಿಸಿದರು. ರವೀಂದ್ರನೇ 'ರಾಜಾ' ಆಗಿದ್ದನು. ಆ ದಿನ ಮಂದಿರದಲ್ಲಿ ರವೀಂದ್ರನು ಜನ್ಮದಿನದ ಕುರಿತು ಹಾಸ್ಯಭರಿತ ಭಾಷಣವಿತ್ತನು. 'ಹುಟ್ಟಿದ ಕೂಡಲೇ ಮಗು ಅಳುತ್ತದೆ. ಬೆಚ್ಚಗಿನ, ಸುರಕ್ಷಿತ, ಮಾತೃಗರ್ಭದಿಂದ ಹೊರಟು ಶೀತಲವಾದ ಹಾಗೂ ಅಪಾಯಕರವಾದ ಈ ಪ್ರಪಂಚಕ್ಕೆ ಬರಲು ಅದು ಇಷ್ಟ ಪಡುವುದಿಲ್ಲ. ಆದರೆ ಆ ಕುಟುಂಬದವರು ಮಾತ್ರ ಮಗು ಹುಟ್ಟಿತೆಂದು ಸಂತೋಷದಿಂದ ಉತ್ಸವವನ್ನು ಆಚರಿಸುವರು. ಸಂಕುಚಿತವಾದ ಜನನಿಯ ಉದರದಿಂದ ವಿಶಾಲ ಪ್ರಪಂಚಕ್ಕೆ ಶಿಶು ಅಡಿಯಿಟ್ಟಿತೆಂಬ ಆನಂದ ಅವರಿಗೆ. ಮುಂದೆ ಜೀವನದಲ್ಲಿ ಆಪತ್ತುಗಳನ್ನೂ ಸಾಹಸಕಾರ್ಯಗಳನ್ನೂ ಎದುರಿಸಿ ಮಾನವನಾಗಿ ಬಾಳಲು ಜನ್ಮವೆತ್ತುವನು. ಆದುದರಿಂದಲೇ ನಾವು ಪ್ರತಿವರ್ಷ ಹುಟ್ಟುಹಬ್ಬವನ್ನು ಆಚರಿಸುವೆವು. ಮನೆಯನ್ನಗಲಿ ಮೊದಲಬಾರಿ ಸಾಲೆಗೆ ಹೋಗುವ ಬಾಲಕನು ಇನ್ನೊಂದು ನೂತನ ಪ್ರಪಂಚಕ್ಕೆ ಕಾಲಿಡುವನು. ಆದುದರಿಂದ ಅದು ಇನ್ನೊಂದು ಜನ್ಮದಿನ. ಇದೇ ರೀತಿ ಜೀವನದಲ್ಲಿ ಪ್ರತಿಸಲ ಹೊಸಹೊಸ ಅನುಭವಕ್ಕೊಳಗಾದಾಗ ಒಂದು ನೂತನ ಪ್ರಪಂಚವನ್ನು ಪ್ರವೇಶಿಸಿ ಸಂಕಷ್ಟ ಸಾಹಸಗಳನ್ನು ಎದುರಿಸುತ್ತೇವೆ. ಅವುಗಳನ್ನು ಕಂಡು ಭಯಪಡ ಬಾರದು. ಅವಿಲ್ಲದೆ ನಮ್ಮ ಆತ್ಮಶಕ್ತಿ ವಿಕಾಸಗೊಳ್ಳದು. ನಾನು ಈ ಶಾಂತಿ ನಿಕೇತನವನ್ನು ಆರಂಭಿಸಿದಂದೇ ಹೊಸ ಜನ್ಮವನ್ನು ಪಡೆದು ಹೊಸ ಪ್ರಪಂಚಕ್ಕೆ ಬಂದೆನು. ನಾವು ಮರಣಹೊಂದಿದಾಗ ಅದೂ ನಮಗೊಂದು ಜನ್ಮದಿನವೇ! ಅರಿತ ಈ ಪ್ರಪಂಚದಿಂದ ಅರಿಯದ ಇನ್ನೊಂದು ವಿಶಾಲ ಜಗತ್ತಿಗೆ ಪ್ರವೇಶಿಸು ತ್ತೇವೆ' ಎಂದನು.

ರವೀಂದ್ರನ 50ನೆಯ ಜನ್ಮದಿನೋತ್ಸವವು ಶಾಂತಿನಿಕೇತನದಲ್ಲಿ ಮಾತ್ರ ವಲ್ಲದೆ ಬಂಗಾಳದಲ್ಲೆಲ್ಲಾ ಆಚರಿಸಲ್ಪಟ್ಟಿತು. ಈ ಸಂದರ್ಭವನ್ನು ಪುರಸ್ಕರಿ ಸುತ್ತಾ ವಂಗದೇಶೀಯರೆಲ್ಲರೂ ರವೀಂದ್ರನ ಮೇಲೆ ತಮಗಿದ್ದ ಗೌರವವನ್ನೂ ಪ್ರೇಮಾಭಿಲಾಷೆಗಳನ್ನೂ ಪ್ರಕಟಿಸಿದರು. ಕಲ್ಕತ್ತಾದಲ್ಲಿ 1912ರಲ್ಲಿ ಬಂಗಾಳೀ ಸಾಹಿತ್ಯಸಂಘದವರು ನಗರ ಸಭಾಭವನದಲ್ಲಿ ಆತನ ಗೌರವಾರ್ಥ ದೊಡ್ಡ ಸಭೆ ಸೇರಿದರು. ರವೀಂದ್ರನ ಕುರಿತಾದ ಜಯಘೋಷವು ಏಕಕಂಠದಿಂದ ಉದ್ಘೋ ಷಿಸಲಾಯಿತು.

ಕೆಲವು ದಿನಗಳ ತರುವಾಯ ಮಾಘೋತ್ಸವವು ನಡೆಯಿತು. ಇದು ಬ್ರಹ್ಮಸಮಾಜದ ವಾರ್ಷಿಕೋತ್ಸವ. ರವೀಂದ್ರನು ಈ ಉತ್ಸವಕ್ಕೆ ಹೋದನು. ಅಲ್ಲಿ ಹೊಸ ಹಾಡೊಂದನ್ನು ಹಾಡಿದನು. ಅದೇ ಇಂದಿನ ನಮ್ಮ ರಾಷ್ಟ್ರೀಯ ಗೀತ.

'ಜನಗಣ ಮನ ಅಧಿನಾಯಕ ಜಯ ಹೇ ಭಾರತ ಭಾಗ್ಯ ವಿಧಾತ
ಜಯ ಹೇ, ಜಯ ಹೇ, ಜಯ ಹೇ, ಜಯ ಜಯ ಜಯ ಜಯ ಹೇ.'

ತರುವಾಯ ಎರಡು ತಿಂಗಳು ಸಾಹಿತ್ಯ ವ್ಯಾಸಂಗದಲ್ಲಿ ನಿರತನಾಗಿ ಯುರೋಪಿಗೆ ಹೋಗಲು ನಿಶ್ಚೈಸಿದನು. ಆದರೆ ಈ ಮಧ್ಯೆ ಅಧಿಕ ಶ್ರಮವಹಿಸಿದ್ದರಿಂದ ಆತನ ಆರೋಗ್ಯವು ಕೆಟ್ಟಿತು. ಆದುದರಿಂದ 'ಶಿಲೇದಾ' ಪ್ರದೇಶಕ್ಕೆ ವಿಶ್ರಾಂತಿ ಪಡೆಯುವುದಕ್ಕಾಗಿ ಬಂದನು. ಅಲ್ಲಿ ಇದ್ದಾಗಲೇ ತಾನು ಬಂಗಾಳಿಯಲ್ಲಿ ಬರೆದ ಕವನಗಳಲ್ಲಿ ಕೆಲವನ್ನು ಕೇವಲ ಹೊತ್ತುಕಳೆಯುವುದಾಕ್ಕಾಗಿ ಆಂಗ್ಲಭಾಷೆಗೆ ಪರಿವರ್ತಿಸಿದನು. ಮುಂದೆ ಯುರೋಪ್ ಪ್ರಯಾಣದಲ್ಲಿ ಕೂಡ ಆತನು ತನ್ನ ಕವನಗಳನ್ನು ಅನುವಾದಮಾಡಿದನು.

1912ರಲ್ಲಿ ತನ್ನ ಇಂಗ್ಲೆಂಡ್ ಪ್ರವಾಸವನ್ನು ಕೈಕೊಂಡನು. ಲಂಡನಿನಲ್ಲಿ ಆತನಿಗೆ ವಿಲಿಯಂ ರಾತೆನ್‌ಸ್ಟೈನ್ ಎಂಬ ಮಿತ್ರನಿದ್ದನು. ಈತನು ಉತ್ತಮ ಕಲಾವಿದನು. ತಾನು ಹಿಂದೂದೇಶಕ್ಕೆ ಬಂದಂದು ಜೋರಸಾಂಕೋಗೆ ಬಂದು ರವೀಂದ್ರನೊಡನೆ ಕಲೆತಿದ್ದನು. ಇಂಗ್ಲೆಂಡಿನಲ್ಲಿ ಪರಸ್ಪರರು ಸಂಧಿಸಿದಾಗ ತಂತಮ್ಮ ಕೃತಿಗಳ ಕುರಿತು ಪ್ರಸ್ತಾಪಿಸಿಕೊಂಡರು. ರಾತೆನ್‌ಸ್ಟೈನ್ 'ನಿಮ್ಮ ಕವನಗಳೇನಾದರೂ ಆಂಗ್ಲಭಾಷೆಗೆ ಪರಿವರ್ತಿಸಲ್ಪಟ್ಟಿವೆಯೇ' ಎಂದು ಪ್ರಶ್ನಿಸಿದನು. ರವೀಂದ್ರನು ತಾನು ಈ ಮೊದಲೇ ಅನುವಾದಿಸಿದುದನ್ನು ಆತನಿಗೆ ತೋರಿಸಿದನು. ಅದೇ 'ಗೀತಾಂಜಲಿ'. ಮಿತ್ರನು ಆ ಪದ್ಯಗಳನ್ನು ಓದಿ ಬಹಳ ಸಂತೋಷಪಟ್ಟು, ಎಲ್ಲರಿಗೂ ಆತನ ಪರಿಚಯವಾಗಬೇಕೆಂದೂ ಎಲ್ಲರೂ ಆತನ ಕವನಗಳನ್ನೋದಬೇಕೆಂದೂ ಉತ್ಸುಕನಾದನು. ರವೀಂದ್ರನು 'ವಿಶ್ವಕವಿ'ಯೆಂದೂ ಆತನ ಕವನಗಳಲ್ಲಿನ ಉನ್ನತ ಭಾವವು ಸರ್ವಮಾನವ ಸಮಾಜಕ್ಕೂ ಹೊಂದಿಕೆಯಾಗುವುದೆಂದೂ ಬಗೆದನು. ಮೊತ್ತಮೊದಲು ಆತನು ರವೀಂದ್ರನ ಗೀತಗಳನ್ನು ಪ್ರಸಿದ್ಧ ಐರಿಷ್ ಕವಿ ಡಬ್ಲ್ಯು. ಬಿ. ಈಟ್ಸ್‌ರವರಿಗೆ ತೋರಿಸಿದನು. ಈಟ್ಸ್, ರವೀಂದ್ರನು ಉತ್ತಮ ಕವಿ ಎಂಬುದನ್ನು ಕೂಡಲೇ ತಿಳಿದುಕೊಂಡನು. ಆಮೇಲೆ ರಾತೆನ್‌ಸ್ಟೈನ್ ಕೆಲವು ಆಂಗ್ಲ ಕವಿಗಳನ್ನು ತನ್ನ ಮನೆಗೆ ಆಹ್ವಾನಿಸಿ ಸಭೆ ನಡೆಸಿದನು. ಈ ಸಭೆಯಲ್ಲಿ ರವೀಂದ್ರನ ಕೃತಿಗಳ ಅನುವಾದಗಳಲ್ಲಿ ಕೆಲವನ್ನು ತಾನೇ ಓದಿಹೇಳಿದನು. ಓದಿ ಮುಗಿಯುವಲ್ಲಿವರೆಗೆ ಸಭ್ಯರು ಯಾರೂ ಏಳಲಿಲ್ಲ. ಅವರ ಮೌನವನ್ನು ಕಂಡು ರವೀಂದ್ರನು ತನ್ನ ಪದ್ಯಗಳು ಅವರಿಗೆ ರುಚಿಸಲಿಲ್ಲವೆಂದು ನಿರುತ್ಸಾಹಗೊಂಡನು. ಆದರೆ ಆತನ ಗೀತಗಳು ಅವರನ್ನು ನಿರುತ್ಸಾಹಗೊಳಿಸಲಿಲ್ಲವೆಂದೂ ಅವರು ಗೀತಗಳಲ್ಲಿ ತನ್ಮಯರಾಗಿದ್ದರೆಂದೂ ಆ ಮೇಲೆ ತಿಳಿದು ಹರ್ಷಿತನಾದನು.

ಆ ದಿನ ಅಲ್ಲಿ ಸೇರಿದವರಲ್ಲಿ ಹಲವರು ರವೀಂದ್ರನ ಜೀವದ ಗೆಳೆಯರಾದರು. ಅವರಲ್ಲಿ ಒಬ್ಬನು 'ಎವರಿಮ್ಯಾನ್ ಲೈಬ್ರೆರಿ' ಸಂಪಾದಕನಾದ ಅರ್ನೆಸ್ಟ್ ರೈಸ್ ಇನ್ನೊಬ್ಬನು ಚಾರ್ಲ್ಸ್ ಫ್ರಿಯರ್ ಅಂಡ್ರೂಸ್ ಎಂಬವನು. ಅಂಡ್ರೂಸನು ಈ ಮೊದಲು ಢಿಲ್ಲಿಯ ಕ್ರೈಸ್ತ ಕಲಾ ಶಾಲೆಯಲ್ಲಿ ಬಹಳ ಕಾಲ ಅಧ್ಯಾಪಕ ನಾಗಿದ್ದನು. ರವೀಂದ್ರನ ಪದ್ಯಗಳನ್ನು ಕೇಳಿದೊಡನೆ ಆತನ ಸ್ನೇಹವನ್ನು ಸಂಪಾದಿಸಬೇಕೆಂದು ಬಹಳ ಕೂತೂಹಲಗೊಂಡನು. ಸಮಾವೇಶವು ಮುಗಿದ ಬಳಿಕ ರವೀಂದ್ರನೊಡನೆ ತಿರುಗಾಟಕ್ಕೆ ಹೊರಟನು. ಕೆಲವು ವರ್ಷಾನಂತರ ಇದನ್ನು ಕುರಿತು 1940ರಲ್ಲಿ ಅಂಡ್ರೂಸನು ತೀರಿಕೊಂಡಾಗ ಶಾಂತಿನಿಕೇತನ ಮಂದಿರದಲ್ಲಿ ಮಾತನಾಡುತ್ತಾ ರವೀಂದ್ರನು ಹೀಗೆಂದನು.

'ನಾನು ಸಾವಕಾಶವಾಗಿ ಹೇಂಪ್‌ಸ್ಟೆಡ್‌ಹೀತ್ ಮೈದಾನವನ್ನು ದಾಟು ತ್ತಿದ್ದೆನು. ಬೆಳದಿಂಗಳ ತೊರೆಯಲ್ಲಿ ಯಾಮಿನಿ ಮೀಯುತ್ತಿದ್ದಳು. ಹಿಂದಿನಿಂದ ಅಂಡ್ರೂಸ್ ಬಂದು ನನ್ನನ್ನು ಕೂಡಿಕೊಂಡನು. ಆ ರಾತ್ರಿಯ ಸ್ತಬ್ಧತೆಯಲ್ಲಿ ಆತನ ಹೃದಯವು ಗೀತಾಂಜಲಿಯ ಭಾವನೆಗಳಿಂದ ತುಂಬಿತ್ತು. ಪರಮಾತ್ಮನ ಮೇಲಿಟ್ಟ ಪ್ರೇಮದಿಂದ ಆತನು ನನ್ನನ್ನು ಪ್ರೀತಿಸತೊಡಗಿದನು. ಆನಿಮಿಷ ಮೊದಲ್ಗೊಂಡು ನಮ್ಮಿಬ್ಬರ ಜೀವನವು ಒಂದೇ ಪ್ರವಾಹದಲ್ಲಿ ಲೀನವಾಗು ವುದೆಂದು ಆಗ ನಾನು ಊಹಿಸಿರಲಿಲ್ಲ.'

ಅಂದಿನಿಂದ ಅಂಡ್ರೂಸ್ ರವೀಂದ್ರನ ಪರಮ ಮಿತ್ರನಾಗಿ ಶಾಂತಿನಿಕೇತನ ದಲ್ಲಿ ಬಹಳ ಕಾಲ ಸೇವೆ ಸಲ್ಲಿಸಿದನು. ಸ್ವದೇಶಕ್ಕೆ ಮರಳಿದ ತರುವಾಯ, ಭಾರತಕ್ಕೆ ಬಂದಾಗಲೆಲ್ಲ ಶಾಂತಿನಿಕೇತನದಲ್ಲೇ ತಂಗುತಿದ್ದನು. ಈ ಸ್ನೇಹವು ಅವರಿಬ್ಬರ ಜೀವನವನ್ನು ಪುನೀತಗೊಳಿಸಿತು.

1912ಕ್ಕಿಂತ ಪೂರ್ವದಲ್ಲಿ ರವೀಂದ್ರನ ಪರಿಚಯವು ಇಂಗ್ಲೆಂಡಿನವರಿಗಿ ರಲಿಲ್ಲ. ವಿಲಿಯಂ ರಾಥೆನ್‌ಸ್ಟೈನ್‌ನ ಮನೆಯಲ್ಲಿ ಸಮಾವೇಶವಾದ ಬಳಿಕ ಒಮ್ಮೆಲೇ ರವೀಂದ್ರನು ಲೋಕ ವಿಖ್ಯಾತನಾದನು. ಆತನ ಗೌರವಾರ್ಥವಾಗಿ ಎಷ್ಟೋ ಸತ್ಕಾರ ಕೂಟಗಳು ನಡೆದುವು. ಬಹಳ ಮಂದಿ ಪ್ರಸಿದ್ಧ ಬರೆಹಗಾರರು ಆತನ ಮಿತ್ರರಾದರು. ಆಂಗ್ಲ ಭಾಷೆಯಲ್ಲಿ 'ಗೀತಾಂಜಲಿ' ಪ್ರಕಟವಾದ ಮೇಲೆ ರವೀಂದ್ರನಿಗೆ ಬಹಳಷ್ಟು ಮಂದಿ ಆಂಗ್ಲ ಮಿತ್ರರಾದರು. ಆದರೆ ಕೆಲವರಿಗೆ ಅವನ ಕವನಗಳು ರುಚಿಸಲಿಲ್ಲ; ಕೆಲವರಿಗೆ ಅರ್ಥವಾಗಲಿಲ್ಲ. ಹಲವರು ಪ್ರಯತ್ನಪಟ್ಟು ಅರ್ಥಮಾಡಿಕೊಂಡವರು, ರವೀಂದ್ರನು ಯಾವುದೋ ನವೀನ ಸಂದೇಶವನ್ನು ನೂತನ ಸತ್ಯವನ್ನು ತಮಗೆ ತಿಳಿಯಪಡಿಸಿದನೆಂದು ಭಾವಿಸಿದರು. ರವೀಂದ್ರನು ಕವಿ ಮಾತ್ರವಲ್ಲದೆ ದೇವದೂತನೆಂದೂ ಪರಿಗಣಿಸಿದರು. ಗೀತಾಂಜಲಿಯ

ಪದ್ಯಗಳನ್ನು ಮರಳಿ ಮರಳಿ ಪೂರ್ಣ ಓದಿ ಕೇಳಿದಾಗಲೇ ಅವುಗಳ ಸೌಂದರ್ಯವನ್ನು ಕಾಣಬಲ್ಲೆವು. ಅವುಗಳಲ್ಲಿ ಒಂದೆರಡರ ಭಾವಗಳನ್ನಿಲ್ಲಿ ಕೊಡಲಾಗಿದೆ.

'ಅವನ ಪ್ರಶಾಂತ ಹಜ್ಜೆಗಳ ಕೇಳಿಲ್ಲವೇ?
ಬರುತಿಹನು ಬರುತಿಹನು ಎಂದೆಂದು ಬರುತಿಹನು. . . .
ಚೈತ್ರ ಮಾಸ ಸುಗಂಧ ಪೂರಿತಾರಣ್ಯದಲಿ
ಬರುತಿಹನು ಬರುತಿಹನು ಎಂದೆಂದು ಬರುತಿಹನು.
ಆಷಾಢ ರಾತ್ರಿಯಲಿ ಭೋರ್ಗರೆವ ಮಳೆಯಲ್ಲಿ
ಗುಡುಗುಡಿಪ ಮೇಘವಾಹನವನೇರಿ
ಬರುತಿಹನು ಬರುತಿಹನು ಎಂದೆಂದು ಬರುತಿಹನು.
ದುಃಖಭಾಜನನಾದ ಎನ್ನೆದೆಯನೊತ್ತುವನು
ತನ್ನ ಕೋಮಲ ಪಾದಕಮಲದಲ್ಲಿ.
ಅವನ ಪಾದದ ದಿವ್ಯ ಸ್ಪರ್ಶಮಾತ್ರದಲೆನ್ನ
ಆನಂದವಿಮ್ಮಡಿಸಿ ಬೆಳಗುತಿಹೆನಿಲ್ಲಿ.

* * *

ನೀನೇ ಬಾಂದಳ ನೀನೇ ಕೋಟರ
ಓ ಸುಂದರ ರೂಪ!
ವಿಧವಿಧ ವರ್ಣದಿ ಮಧುರಾಲಾಪದಿ
ಸುಮಧುರ ಪರಿಮಳ ಬೀರಿ
ತೋರುವ ಜೀವವ ಪ್ರೇಮದಿ ಬಲಿದು
ಬೆರೆಯುವೆ ನೀನಲ್ಲಿ.
ಬೃಹದಾಕಾಶದಿ ವಿಹರಿಪ ಜೀವಕೆ
ಸ್ವಚ್ಛ ಧವಳ ಕಾಂತಿಯ ಬೀರಿ
ಹಗಲಿರುಳೆನ್ನದೆ ಬಣ್ಣವದಿಲ್ಲದೆ
ರೂಪಾತೀತದೆ ಮೌನದಲಿ.

* * *

ಎನ್ನ ಸೋದರರೊಳಗೆ ನೀನೊಬ್ಬನಲ್ಲವೇ
ಆದರೂ ಆನವರ ಗಣಿಸೆನೆಂದೂ.
ಎನ್ನ ಸಂಪಾದನೆಯನವರೊಳಗೆ ಹಂಚುವೆನೆ
ಎಲ್ಲವನು ನಿನಗೊಪ್ಪಿಸೆ.

ಎನ್ನ ಸುಖದುಃಖಂಗಳಲ್ಲವರ ಸೇರುವೆನೆ
ನಿನ್ನ ಬಳಿಸೇರ್ದ ಮೇಲೆ.
ಎನ್ನ ಜೀವವ ಭವಾಂಬುಧಿಯಲ್ಲಿ ಮುಳುಗಿಪೆನೆ
ನಿನ್ನ ನಾ ಸಾರ್ದ ಮೇಲೆ.'

1912—1913ರ ಚಳಿಗಾಲದಲ್ಲಿ ರವೀಂದ್ರನು ಅಮೆರಿಕಾವನ್ನು ಸಂದರ್ಶಿಸಿದನು. ಅಲ್ಲಿ ಚಿಕಾಗೋ ಹಾರ್ವರ್ಡ್ ಮೊದಲಾದ ವಿಶ್ವವಿದ್ಯಾಲಯಗಳಲ್ಲಿ ಚಿರಕಾಲದಿಂದ ತನಗೆ ಪ್ರಿಯವಾಗಿದ್ದ ವಿಷಯಗಳ ಕುರಿತು ಉಪನ್ಯಾಸವಿತ್ತನು. ಅವುಗಳಲ್ಲೊಂದು—'ಪ್ರಾಚೀನ ಭಾರತದ ನಾಗರಿಕತೆಯ ಆದರ್ಶಗಳು'. ಶಾಂತಿನಿಕೇತನವು ವೇದಕಾಲದ ವಿದ್ಯಾರ್ಥಿ ಜೀವನದ ಬಾಹ್ಯ ಸರಳತೆಯನ್ನೂ ಪ್ರಶಾಂತತೆಯನ್ನೂ ಆಂತರಿಕ ಸಮರಸ ಸತ್ಯಗಳನ್ನೂ ಪುನರುಜ್ಜೀವನಗೊಳಿಸಿ ಆಧುನಿಕ ಪ್ರಪಂಚಕ್ಕೆ ಹೊಂದಿಸಿಕೊಂಡು ಹೋಗುತ್ತಿರುವುದನ್ನು ವಿವರಿಸಿದನು. ಇನ್ನೊಂದು ಉಪನ್ಯಾಸ ವಿಷಯವು 'ಜಾತಿಭೇದ'. ಅಮೆರಿಕಾದಲ್ಲಿ ಬಿಳಿಜನರು, ನಿಗ್ರೋಜನರು, ಎಂಬ ಭೇದ ಭಾವವು ಹೆಚ್ಚು. ಭಾರತದಲ್ಲಿಯೂ ಜಾತಿಭೇದವು ಅಸಂಖ್ಯಾತವಾಗಿದೆ. ಆದುದರಿಂದ ಈ ಸಮಸ್ಯೆ ಎರಡು ದೇಶದವರಿಗೂ ಸಮಾನವಾದುದು ಹಾಗೂ ಪ್ರಮುಖವಾದುದು. ತನ್ನ 'ಹಾರ್ವಾರ್ಡ್' ಉಪನ್ಯಾಸಗಳನ್ನೆಲ್ಲ ಒಟ್ಟುಗೂಡಿಸಿ 'ಸಾಧನ'ವೆಂಬ ಹೆಸರಿನಿಂದ ಪುಸ್ತಕರೂಪದಲ್ಲಿ ಪ್ರಕಟಿಸಿದನು. ಇದು ಪದ್ಯರೂಪದಲ್ಲಿ ಹೊರಗೆಡವಿದ ತನ್ನ ಭಾವನೆಗಳನ್ನೇ ಗದ್ಯರೂಪದಲ್ಲಿ ತಿಳಿಸುತ್ತದೆ. ರವೀಂದ್ರನು ಅಮೆರಿಕಾದಿಂದ ಇಂಗ್ಲೆಂಡಿಗೆ ಹೋಗಿ ಅಲ್ಲಿ ಕೆಲವು ದಿನವಿದ್ದು ಸ್ವದೇಶಕ್ಕೆ ಮರಳಿದನು.

1913ನೆಯ ನವೆಂಬರ್ ತಿಂಗಳಲ್ಲಿ ರವೀಂದ್ರನು ಸ್ವದೇಶಕ್ಕೆ ಬಂದ ಕೆಲವೇ ದಿನಗಳಲ್ಲಿ ಆತನಿಗೆ ಸಾಹಿತ್ಯದ 'ನೊಬೆಲ್' ಬಹುಮಾನವು ಕೊಡಲಾಗಿದೆ ಎಂಬ ವಾರ್ತೆ ಬಂತು. ಈ ಬಹುಮಾನವು ಸ್ವೀಡನ್ ದೇಶದ ಸಂಸ್ಥೆಯವರಿಂದ ಪ್ರತಿವರ್ಷ ವಿವಿಧ ಕ್ಷೇತ್ರಗಳಲ್ಲಿ ಶ್ರೇಷ್ಠರಾದವರಿಗೆ ಕೊಡಲಾಗುತ್ತದೆ. ರವೀಂದ್ರನಿಗಿಂತ ಮೊದಲು ಐರೋಪ್ಯರಲ್ಲದವರು ಈ ಬಹುಮಾನವನ್ನು ಪಡೆದಿರಲಿಲ್ಲ. ಆ ದಿನ ಭಾರತೀಯ ಕವಿಗೆ ದೊರೆತ ವಿಶೇಷ ಗೌರವದ ಕುರಿತಾದ ಉತ್ಸವವನ್ನು ಅತ್ಯಂತಾನಂದದಿಂದ ಭಾರತದ ಆದ್ಯಂತ ಜನತೆ ಕೊಂಡಾಡಿತು. ರವೀಂದ್ರನು ಸಹಜವಾಗಿ ಸಂತುಷ್ಟನಾದನು. ದ್ವೇಷಪೂರ್ಣ ವಿಮರ್ಶೆಯನ್ನು ಆತನು ಲಕ್ಷಿಸಲಿಲ್ಲವಾದರೂ ಇದರಿಂದ ಆತನಿಗೆ ಬಹಳ ನೋವುಂಟಾಗುತಿತ್ತು; ನಿರುತ್ಸಾಹವಾಗುತಿತ್ತು. ಈ ಕುರಿತು ಆತನು ಅಂಡ್ರೂಸನಿಗೆ ಬರೆದ ಹಾಸ್ಯ

ಭರಿತ ಪತ್ರದಲ್ಲಿ ಹೀಗೆಂದಿರುವನು:—'ನನ್ನ ವಿಮರ್ಶಕರಿಗಿಂತ ನಾನೇ ಹೆಚ್ಚಿನವನೆಂದು ಭಾವಿಸಲಾರೆ. ಅವರು ನನ್ನನ್ನು ಕುರಿತು ಏನೆಲ್ಲ ಬರೆದರೂ ನಾನು ಅವರನ್ನು ಲಕ್ಷಿಸಲಾರೆನೆಂದರೆ ಯಾರೂ ನನ್ನನ್ನು ನಂಬದಿರಿ!'

ಈ 'ನೋಬೆಲ್' ಬಹುಮಾನದ ಧನವನ್ನೆಲ್ಲ ರವೀಂದ್ರನು ಶಾಂತಿನಿಕೇತನಕ್ಕಾಗಿಯೇ ವಿನಿಯೋಗಿಸಿದನು. ಆದರೆ ಆತನನ್ನು ಇದುವರೆಗೂ ತೀವ್ರವಾಗಿ ಟೀಕಿಸಿದವರೆಲ್ಲರೂ ಈಗ ಮೆಚ್ಚಿಕೊಂಡು ಉತ್ಸವವನ್ನಾಚರಿಸುವುದು ಆತನಿಗೆ ಹಿಡಿಸಲಿಲ್ಲ. 'ಗೌರವಾರ್ಹರು ದೇಶದಲ್ಲಿ ಬಹಳಷ್ಟು ಮಂದಿ ಇದ್ದಾರೆ. ಅವರನ್ನು ಯೋಗ್ಯರೀತಿಯಲ್ಲಿ ಪುರಸ್ಕರಿಸುವವರಿಲ್ಲ'ವೆಂದು ಆತನು ಎಚ್ಚರಿಸಿದನು. ವಿದೇಶೀಯರು ರವೀಂದ್ರನನ್ನು ಈ ವಿಧವಾಗಿ ಗೌರವಿಸಿದುದನ್ನು ನೋಡಿ, ಇದುತನಕ ಆತನ ಗ್ರಂಥಗಳನ್ನೋದದ ಭಾರತೀಯರು ಕೂಡ ಈಗ ಆತನನ್ನು ಶ್ಲಾಘಿಸತೊಡಗಿದರು. ಇದನ್ನು ಕಂಡ ರವೀಂದ್ರನು ತನ್ನ ದೇಶಬಾಂಧವರಲ್ಲಿ ವಿಚಕ್ಷಣೆ, ಆತ್ಮಗೌರವವಿಲ್ಲದುದಕ್ಕಾಗಿ ಬಹಳ ನಾಚಿಕೆಪಟ್ಟನು.

ಆ ವರ್ಷವೇ ಕಲ್ಕತ್ತಾ ವಿಶ್ವವಿದ್ಯಾಲಯದವರು ರವೀಂದ್ರನಿಗೆ ಸಾಹಿತ್ಯದಲ್ಲಿ 'ಡಾಕ್ಟರ್' ಪದವಿಯನ್ನಿತ್ತು ಗೌರವಿಸಿದರು. 1915ರಲ್ಲಿ ಸರಕಾರವು ಆತನ ಬರೆಹಗಳ ಮಹತ್ವವನ್ನರಿತು 'ಸರ್' ಬಿರುದನ್ನಿತ್ತು ಗೌರವಿಸಿತು. 'ಗೀತಾಂಜಲಿ' ಆತನನ್ನು ಲೋಕವಿಖ್ಯಾತನನ್ನಾಗಿ ಮಾಡಿತು. ಭಾರತೀಯರು ಮಾತ್ರವಲ್ಲದೆ ಪ್ರಪಂಚದ ನಾಗರಿಕ ರಾಷ್ಟ್ರದವರೆಲ್ಲ ಆತನ ಗ್ರಂಥಗಳನ್ನು ಓದತೊಡಗಿದರು; ಆತನ ದಿವ್ಯ ವಾಣಿಯನ್ನು ಕೇಳತೊಡಗಿದರು.

## ಅಧ್ಯಾಯ ೯.

## ಮಹಾಯುದ್ಧದ ಕಾರ್ಮೋಡ

(1914—1919)

**1912—1913**ರ ರವೀಂದ್ರನ ವಿದೇಶ ಪ್ರವಾಸವು ಸರ್ವ ವಿಧದಲ್ಲಿಯೂ ಫಲಪ್ರದವಾದುದು. ಆತನ ಭಾವನೆಗಳನ್ನು ಅರ್ಥಮಾಡಿಕೊಂಡವರೆಲ್ಲರೂ ಅವನ ಪರಮಮಿತ್ರರಾದರು. ಯುರೋಪಿನ ಮಹಾಮೇಧಾವಿಗಳು ಮಾತ್ರವಲ್ಲದೆ ಜನಸಾಮಾನ್ಯರೂ ಆತನ ಪ್ರೀತಿವಿಶ್ವಾಸಗಳಿಗೆ ಪಾತ್ರರಾದರು. ಆದರೆ ಪಾಶ್ಚಾತ್ಯ ನಾಗರಿಕತೆಯು ಅಡ್ಡದಾರಿ ಹಿಡಿಯುತ್ತಿರುವುದನ್ನು ಕಂಡು ಆತನು ಮಮ್ಮಲಮರುಗಿದನು. ಪಾಶ್ಚಾತ್ಯ ಪ್ರಭುತ್ವಗಳು ಕೇವಲ ಐಶ್ವರ್ಯ,

ಸುಖಸಾಧನೆ ಪ್ರಾಣರಕ್ಷಣೆಗಳಿಗೇ ಹೆಚ್ಚಿನ ಪ್ರಾಧಾನ್ಯವೀಯುತಿದ್ದರೇ ವಿನಾ ಸತ್ಯಧರ್ಮಗಳಿಗೆ ಸಾಕಷ್ಟು ಗಮನವೀಯುತ್ತಿರಲಿಲ್ಲ. ಯುರೋಪಿನ ಎಲ್ಲರಾಷ್ಟ್ರಗಳೂ ಅನ್ಯೋನ್ಯ ಭಯಾಶಂಕೆಗಳಿಗೊಳಗಾಗಿದ್ದುವು. ಪ್ರತಿ ರಾಷ್ಟ್ರವೂ ಅನ್ಯರಾಷ್ಟ್ರದ ಆಕ್ರಮಣವನ್ನೆದುರಿಸುವ ಸಲುವಾಗಿ ದೊಡ್ಡ ಸೈನ್ಯ ಮತ್ತು ನೌಕಾಪಡೆಗಳನ್ನು ನಿರ್ಮಿಸುತಿದ್ದುವು. ಎಲ್ಲಿನೋಡಿದರೂ ಪರಸ್ಪರ ಅವಿಶ್ವಾಸ, ಅಸೂಯೆ ಹಿಂಸೆಗಳು ತಾಂಡವವಾಡುತಿದ್ದುವು. ಪಾಶ್ಚಾತ್ಯ ನಾಗರಿಕತೆ ಈ ಪ್ರಕಾರವಾಗಿ ಅವನತಿಗಿಳಿಯುತ್ತಿರುವುದನ್ನು ಕಂಡು ಶೀಘ್ರದಲ್ಲೇ ಭೀಕರ ಅನರ್ಥವು ಸಂಭವಿಸಬಹುದೆಂದು ರವೀಂದ್ರನು ಬಗೆದನು.

ವಿವಿಧ ಜನಾಂಗದವರು ತಮ್ಮ ನಿಜವಾದ ಸುಖಸಂಪತ್ತುಗಳನ್ನು ಪರಸ್ಪರ ಸ್ನೇಹಸಹಕಾರ ಮಾತ್ರದಿಂದಲೇ ಹೊಂದಬಲ್ಲರೆಂಬುದನ್ನು ರವೀಂದ್ರನು ಮನಗಂಡನು. ಆತನು ಶಾಂತಿನಿಕೇತನದ ವಿದ್ಯಾರ್ಥಿಗಳಿಗೆ–ಮಾನವ ಚರಿತ್ರೆಯು ಕೇವಲ ಹೆಸರು ತಾರೀಕುಗಳ ದಾಖಲೆಯಲ್ಲ; ಮಾನವನ ನೈಜಜೀವನಕ್ಕೂ ಇವಕ್ಕೂ ಏನೇನೂ ಸಂಬಂಧವಿಲ್ಲವೆಂದು ಬೋಧಿಸಿದನು. ಆ ಕಥೆ ಬಹಳ ಅರ್ಥವತ್ತಾದುದು. ಆದಿಯಿಂದಲೂ ಮಾನವರು ಹೇಗೆ ಕ್ರಮವಾಗಿ ಸಣ್ಣ ಸಣ್ಣ ಕುಟುಂಬಗಳಾಗಿ, ತಂಡಗಳಾಗಿ, ಕೊನೆಯಲ್ಲಿ ಜನಾಂಗಗಳಾಗಿ ಅನ್ಯೋನ್ಯ ಸಹಕರಿಸುತ್ತಾ ಅಭಿವೃದ್ಧಿಗೊಂಡರೆಂಬುದನ್ನು ಚರಿತ್ರೆಯು ತಿಳಿಸುವುದು. ಹಿಂದೂದೇಶದ ಚರಿತ್ರೆಯು ವಿದೇಶೀಯರ ದಂಡಯಾತ್ರೆಗಳಿಂದ ತುಂಬಿದೆ. ಆದರೆ ಪ್ರತಿಯೊಂದು ಬಾರಿಯೂ ಇಲ್ಲಿಗೆ ದಂಡೆತ್ತಿ ಬಂದ ವಿದೇಶೀಯರು ಇಲ್ಲಿಯೇ ಸ್ಥಿರವಾಗಿ ನೆಲಸಿ ಹಿಂದೂದೇಶದ ಪ್ರಜೆಗಳೊಡನೆ ಕಲೆತು ಶಾಂತಿಯುತ ಜೀವನವನ್ನು ಸಾಗಿಸಿದರು. ಎಲ್ಲ ಜನಾಂಗದವರೂ ಒಂದೇ ಮಾನವ ಕುಟುಂಬವಾಗಿ ಮಾರ್ಪಟ್ಟು ಶಾಂತರೀತಿಯಲ್ಲಿ ಹೇಗೆ ಜೀವಿಸಬಲ್ಲರೆಂಬುದನ್ನು ಇದರಿಂದ ತಿಳಿದುಕೊಳ್ಳಬಹುದು. ಪ್ರತಿಯೊಂದು ಜನಾಂಗಕ್ಕೂ ತನ್ನದೇ ಆದ ವೈಲಕ್ಷಣ್ಯವಿದೆ. ಈ ಭಿನ್ನಭಿನ್ನ ವೈಲಕ್ಷಣ್ಯಗಳು ಪ್ರಪಂಚಶಾಂತಿಗೆ, ಸಂಪತ್ತಿಗೆ ಸಹಕರಿಸುವುದಕ್ಕಲ್ಲದೆ ಹೋರಾಡುವುದಕ್ಕಲ್ಲ. ಸಮಸ್ತ ಜನಾಂಗದವರೂ ಸಮಷ್ಟಿ ಕುಟುಂಬಗಳಾಗಿ ಮಾರ್ಪಟ್ಟು ತಂತಮ್ಮ ಪ್ರತ್ಯೇಕ ಸೌಂದರ್ಯ ಪ್ರತಿಭೆಗಳನ್ನು ಸರ್ವ ಮಾನವ ಕಲ್ಯಾಣಕ್ಕಾಗಿ ವಿನಿಯೋಗಿಸಿಕೊಳ್ಳಬೇಕು.

ಈ ಸುಗಮ ಮಾರ್ಗವನ್ನು ಮಾನವರು ಅನುಸರಿಸಬಲ್ಲರೇ? ಈ ವಿಷಯದಲ್ಲಿ ಹಿಂದೂದೇಶವೇ ಮಿಕ್ಕವರಿಗೆ ಮಾರ್ಗದರ್ಶಕವಾಗಿ ಶಾಂತಿಮಾರ್ಗವನ್ನು ಸೂಚಿಸಬೇಕು. ನೂರಾರು ವರ್ಷಗಳಿಂದ ಅನೇಕ ಜಾತಿ ಮತ ಪಂಥ ಭಾಷೆಗಳಿಂದ ಕೂಡಿದ ಭಾರತವು ಒಂದಾಗಿ ಬಾಳಲಿಲ್ಲವೇ? ಪುರಾತನ ಹಿಂದುಗಳು

ಪೌರಸ್ತ್ಯರಿಗೂ ಪಾಶ್ಚಾತ್ಯರಿಗೂ ಸಮವಾಗಿ ಸ್ನೇಹಪೂರ್ಣ ಸ್ವಾಗತವನ್ನಿತ್ತರು. ಎಲ್ಲ ಜನಾಂಗದವರ ನಾಗರಿಕತಾ ಪ್ರವಾಹ ಸಂಗಮಸ್ಥಾನವೇ ಭಾರತ. ಆದುದರಿಂದ ಸರ್ವಮಾನವ ಸಮೂಹಕ್ಕೂ ಬೇಕಾದ ಶಾಂತಿಸಹಕಾರಗಳ ಮಾರ್ಗವನ್ನು ಇಲ್ಲಿಂದಲೇ ಅರಿತುಕೊಳ್ಳಬಹುದು.

ಅಂತಾರಾಷ್ಟ್ರೀಯ ಸಖ್ಯವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಶಾಂತಿನಿಕೇತನವು ಪ್ರಮುಖ ಪಾತ್ರವನ್ನು ವಹಿಸಬೇಕೆಂದು ರವೀಂದ್ರನು ಆಶಿಸಿದನು. 1913ರಲ್ಲಿ ಆತನು ಅಂಡ್ರೂಸನಿಗೆ 'ನಮ್ಮ ವಿದ್ಯಾರ್ಥಿಗಳಿಗೆ ವಿಶಾಲಮನೋಭಾವನೆಯೂ ವಿಶ್ವಮಾನವ ಸೌಭ್ರಾತೃತ್ವವೂ ಲಭಿಸುವಂತೆ ಪ್ರಯತ್ನಿಸಬೇಕು!' ಎಂದು ಪತ್ರ ಬರೆದನು. 1914ರಲ್ಲಿ ಅಂಡ್ರೂಸನು, ಪಿಯರ್ಸನ್ ಎಂಬ ತನ್ನ ಗೆಳೆಯನೊಂದಿಗೆ ಶಾಂತಿನಿಕೇತನವನ್ನು ಸೇರಿದನು. ಇವರ ಆಗಮನವನ್ನು ಕಂಡು ರವೀಂದ್ರನು ಅತ್ಯಂತ ಹರ್ಷಿತನಾದನು. ಶಾಂತಿನಿಕೇತನವು ನಿಜವಾಗಿ ಅಂತಾರಾಷ್ಟ್ರೀಯ ಸಂಸ್ಥೆಯಾಗತೊಡಗಿತು. 1915ರಲ್ಲಿ ದಕ್ಷಿಣ ಆಫ್ರಿಕದಲ್ಲಿರುವ ಭಾರತೀಯರೊಂದಿಗೆ ಸಂಪರ್ಕವುಂಟಾಯಿತು. ಅಲ್ಲಿ ಮಹಾತ್ಮಾಗಾಂಧಿಯವರು ಸ್ಥಾಪಿಸಿದ 'ಫೋನಿಕ್ಸ್' ಪಾಠಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿಗಳು ಶಾಂತಿನಿಕೇತನಕ್ಕೆ ಬಂದು ಕೆಲವು ಕಾಲ ತಂಗಿದರು. ಶಾಂತಿನಿಕೇತನದ ವಿದ್ಯಾರ್ಥಿಗಳು ಅವರನ್ನು ಸಂತೋಷದಿಂದ ಸ್ವಾಗತಿಸಿದರು. ಆಗ ಮಹಾತ್ಮರೂ ರವೀಂದ್ರನೊಂದಿಗೆ ನಿಂತರು. ಇದೇ ಭಾರತದ ಮುಂದಾಳುಗಳಿಬ್ಬರ ಪ್ರಥಮ ಸಮಾಗಮವಾಯಿತು. ಈ ರೀತಿಯಲ್ಲಿ ಶಾಂತಿನಿಕೇತನವು ಕ್ರಮಕ್ರಮವಾಗಿ ಎಲ್ಲ ದೇಶದವರೊಂದಿಗೆ ಸ್ನೇಹ ಸಹಾನುಭೂತಿಯ ಸಂಪರ್ಕ ಬೆಳೆಸಿತು.

1914ರ ಆಗಸ್ಟ್ ತಿಂಗಳಲ್ಲಿ ರವೀಂದ್ರನು ಊಹಿಸಿದಂತೆ ಯುರೋಪಿನಲ್ಲಿ ಮಹಾಯುದ್ಧ ಪ್ರಾರಂಭವಾಯಿತು. ನಾಲ್ಕು ವರ್ಷಗಳ ಕಾಲ ನಡೆದ ಹೋರಾಟದಲ್ಲಿ ಅಸಂಖ್ಯಾತ ಮಂದಿ ಮರಣಕ್ಕೀಡಾದರು; ಸರ್ವನಾಶವಾಯಿತು. ಈ ವಿಷಾದ ಘಟನೆಯಿಂದಾಗಿ ರವೀಂದ್ರನಿಗೆ ಮಾನವತ್ವದಲ್ಲಿಯೂ ಸ್ವಾತಂತ್ರ್ಯದಲ್ಲಿಯೂ ಇದ್ದ ದೃಢವಿಶ್ವಾಸವು ಸಡಿಲಾಯಿತು. ಆದರೆ ಆತನು ಧೈರ್ಯವನ್ನು ತಂದುಕೊಂಡು ತನ್ನ ಭಾವನೆಗಳನ್ನು ಅನುಸರಿಸುತ್ತಾ ಸ್ಥಿರಚಿತ್ತನಾದನು. ಅನ್ಯರಿಗೆ ಹಿತಬೋಧನೆಯನ್ನು ಮಾಡುವುದಕ್ಕಿಂತ ನಮ್ಮ ಜೀವನವನ್ನು ಋಜುಮಾರ್ಗದಲ್ಲಿ ಸಾಗಿಸುವುದೇ ಶ್ರೇಯಸ್ಕರವೆಂದು ನಂಬಿದನು. 'ನನ್ನ ಅಂತಜ್ಯೋ೯ತಿಯನ್ನು ಬೆಳಗುವಂತೆ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ; ವೃಥಾ ಕೈಯಲ್ಲಿ ಜ್ಯೋತಿಯನ್ನು ಹಿಡಿಯುವುದಕ್ಕಲ್ಲ,' ರವೀಂದ್ರನೆಂದನು. ಶಾಂತಿನಿಕೇತನದ ವಿದ್ಯಾರ್ಥಿಗಳು ತನ್ನ ಅಭಿಪ್ರಾಯಗಳನ್ನೇ ಅನುಸರಿಸಬೇಕೆಂದು

ಕೋರಲಿಲ್ಲ. ಅವರ ಇಚ್ಛಾನುಸಾರ ವರ್ತಿಸಲು ಸ್ವಾತಂತ್ರ್ಯವಿತ್ತನು. ರವೀಂದ್ರನು, 'ನನ್ನ ಸಹೋದ್ಯೋಗಿಗಳನ್ನು ಯಾವ ವಿಧವಾದ ನಿರ್ಬಂಧಕ್ಕೊಳಗಾಗಿಸಲು ನನಗಿಷ್ಟವಿಲ್ಲ. ಉತ್ತಮ ಭಾವನೆಗಳು ಸ್ವೇಚ್ಛೆಯಿಂದಲೇ ಪರಿಪಕ್ವವಾಗುವುವಲ್ಲದೆ ನಿರ್ಬಂಧದಿಂದಲ್ಲ. ನನ್ನ ಸಹೋದ್ಯೋಗಿಗಳು ಗುಲಾಮರನ್ನಾಳುವುದನ್ನು ನೋಡುವುದಕ್ಕಿಂತಲೂ ಅವರು ಸ್ವೇಚ್ಛಾಜೀವಿಗಳಾಗಿ ಮರಣವನ್ನು ಹೊಂದುವುದೇ ನನಗಿಷ್ಟವು,' ಎಂದನು.

ಯುದ್ಧಾರಂಭವಾದ ಮೊದಲ ವರ್ಷಗಳಲ್ಲಿ ರವೀಂದ್ರನು 'ಬಾಲಕ'ವೆಂಬ ಸುಂದರ ಪದ್ಯಕಾವ್ಯವನ್ನು ರಚಿಸಿದನು. ಇದರ ಹಲವು ಪದ್ಯಗಳು ಯುದ್ಧಕಾಲದ ಭಯಂಕರ ಅನಾಹುತ ಘಟನೆಗಳ ಸ್ಫೂರ್ತಿಯಿಂದ ಪ್ರೇರಿತವಾದುವು. ಕೆಲವು, ವಿಜ್ಞಾನ ಶಾಸ್ತ್ರವು ವಿಶದೀಕರಿಸಿದ ಜೀವಿತ ರಹಸ್ಯಗಳಿಗೆ ಸಂಬಂಧಿಸಿದುವು. ಯುದ್ಧಕಾಲದಲ್ಲಿ ಜನರು ಪರಮಾತ್ಮನ 'ತೀರ್ಪನ್ನು' ಕುರಿತು ಆಡಿಕೊಳ್ಳುವುದನ್ನು ನಾವು ಕೇಳುತ್ತೇವೆ. ತಪ್ಪುಮಾಡಿದ ಜನಾಂಗವನ್ನು ಪರಮಾತ್ಮನು ಯುದ್ಧಮುಖೇನ ಶಿಕ್ಷಿಸುವನೆಂಬುದು ಕೆಲವರ ಭಾವನೆ. ಕ್ಷಮೆಯು—ಪ್ರೇಮ, ದಯೆ, ನಯ, ವಿನಯ, ಸೌಂದರ್ಯವೇ ಮೊದಲಾದ ಸುಂದರ ಭಾವನೆಗಳಿಂದ ಪೂರ್ಣವಾದುದೆಂದು ಬಹಳ ಮಂದಿಯ ಅಭಿಪ್ರಾಯ. 'ತೀರ್ಪು' ಎಂಬ ಕವನದಲ್ಲಿ ರವೀಂದ್ರನು ಈ ಭಾವನೆಗಳನ್ನು ಆಕ್ಷೇಪಿಸಿ ಅವುಗಳ ಗೂಢಾರ್ಥವನ್ನು ವಿವರಿಸುವನು:—

'ಅಡವಿಯ ವಿಕಸಿತ ಹೂಗಳಲಿ
ಸ್ಪರ್ಶಮಧುರ ತಂಗಾಳಿಯಲಿ
ಹಚ್ಚನೆ ಕಂಗೊಳಿಸುವ ಬಯಲಿನಲಿ
ಗುಂಜಾರವ ಗೈಯುವ ಭ್ರಮರದಲಿ
ಪಕ್ಷಿಗಳ ವಸಂತ ಸುಗಾನದಲಿ
ಅಲೆಗಳು ಮುದ್ದಾಡುವ ದಡಗಳಲಿ
ಗಾಳಿಗೆ ತೊನೆಯುವ ಹಸುರೆಲೆಗಳಲಿ
ನಿನ್ನಯ ಧರ್ಮಾಸನವಿಹುದಲ್ಲಿ.

* * *

ಮಾತುಬಾರದ ಪ್ರೇಮ ಬಾಧೆಯಲ್ಲಿ
ನಿದ್ದೆಬಾರದ ಮುದ್ದು ಕಣ್ಣಳಲ್ಲಿ
ಮಿತ್ರರಾ ಸೋರ್ವ ಕೆನ್ನೆತ್ತರಲ್ಲಿ

ಪ್ರಣಯಿಯಾ ಪ್ರೇಮ ಜಾಗರಣದಲ್ಲಿ
ಓ ಪ್ರೇಮ ಮೂರ್ತಿ ನಿನ್ನಾಸನವದಲ್ಲಿ.

* * *

ಓ ಭಯಂಕರ ಮೂರ್ತಿ!
ಪ್ರಳಯ ಪ್ರಚಂಡ ಝಂಝಾವಾತದಲ್ಲಿ
ಕಾಲಾಗ್ನಿರುದ್ರ ಭೀಕರತೆಯಲ್ಲಿ
ಸಂಧ್ಯಾರುಣಜ್ವಾಲೆಯಾ ನಾಶದಲ್ಲಿ
ಆಕಸ್ಮಿಕಾಂಧ ಹೋರಾಟದಾರ್ಭಟೆಯಲ್ಲಿ
ನಿನ್ನ ಕ್ಷಮಾಸ್ಥಾನವಿರುವುದಲ್ಲಿ.'

ರವೀಂದ್ರನ ಮನಸ್ಸು ಕೇವಲ ಗಂಭೀರ ವಿಷಯಗಳಲ್ಲಿ ಹಾಗೂ ದುಃಖ ಸಂಕಟಗಳಲ್ಲಿ ಮುಳುಗಿರಲಿಲ್ಲ. ಮಾನವರು ಹೋರಾಡಿ ಮಡಿಯುವರು. ಆದರೆ ಪ್ರಕೃತಿ ಶೋಭೆ ಮಾತ್ರ ತಗ್ಗದು. ಸೂರ್ಯನು ಬೆಳಗುವನು, ಮಳೆ ಸುರಿಯುವುದು, ಗಾಳಿ ಬೀಸುವುದು. ವಸಂತದಲ್ಲಿ ಎಲೆ ಚಿಗುರಿ ಹೂಗಳು ಶೋಭಿಸುವುವು. ಲೋಕವೆಲ್ಲಾ ಸುವಾಸನೆಯಿಂದ ತುಂಬುವುದು. ಈ ಅಭಿಪ್ರಾಯವನ್ನು ವಿಸ್ತರಿಸಿ ಋತು ಶೋಭೆಯನ್ನು ವರ್ಣಿಸುವ 'ಫಾಲ್ಗುಣಿ' ನಾಟಕವನ್ನು 1915ರಲ್ಲಿ ರಚಿಸಿದನು. ಇದನ್ನು ಶಾಂತಿನಿಕೇತನದಲ್ಲಿ ಅಭಿನಯಿಸಿದರು.

'ಫಾಲ್ಗುಣಿ ಗೀತಾನಾಟಕ'ವನ್ನು ಸಮಯ ಕಳೆಯುವುದಕ್ಕಾಗಿ ಓದಿದಾಗಲೂ, ನದಿಯ ಕಲಕಲನಿನಾದದಂತೆ ಅದು ಶ್ರುತಿಮಧುರವಾಗುವುದು. ಎಂದ ಮೇಲೆ ಸಂಗೀತ, ನಾಟ್ಯ, ಬಣ್ಣ ಬಣ್ಣದ ಉಡುಗೆತೊಡುಗೆಗಳಿಂದ ಅಲಂಕೃತರಾಗಿ ಅಭಿನಯಿಸಿದಾಗ ನೋಡಲು ಮನೋಹರವಾಗದಿರುವುದೇ? ನಾಟಕದ ಉಪೋದ್ಘಾತದಲ್ಲಿ ರಾಜನು ತಲೆಯಲ್ಲಿನ ಎರಡು ನರೆತ ಕೂದಲನ್ನು ನೋಡಿ ತನಗೆ ಮುಪ್ಪು ಬಂತಲ್ಲಾ ಎಂದು ಮರುಗುವನು; ಮರಣವನ್ನು ಕುರಿತು ಚಿಂತಿಸುವನು. ರಾಜಪುರೋಹಿತನ ಉಪದೇಶಗಳನ್ನು ಕೇಳಿ ವಿರಕ್ತನಾಗಿ ರಾಜಕಾರ್ಯವನ್ನು ಬಿಟ್ಟುಬಿಡುವನು. ಆಗ ಅಲ್ಲಿಗೊಬ್ಬ ಕವಿ ಬರುವನು. ತಾನೊಂದು ಹೊಸ ನಾಟಕವನ್ನು ಬರೆದಿರುವೆನೆಂದೂ ಅದರಲ್ಲಿ ತತ್ತ್ವೋಪದೇಶಗಳಿಲ್ಲವೆಂದೂ ಕೇವಲ ಹಾಡುಗಳು ಮಾತ್ರವೇ ಇರುವುವೆಂದೂ ಹೇಳುವನು. ಜೀವನಾನಂದವನ್ನು ಹೊರಗೆಡಹುವುದು ಮಾತ್ರವೇ ನಾಟಕದ ಉದ್ದೇಶ. ಇದರ ಕಥಾವಸ್ತುವನ್ನು ವಿಶ್ವಕವಿಯ ನಾಟಕದಿಂದ ಆಯ್ದುಕೊಳ್ಳಲಾಗಿದೆ. 'ಶಿಶಿರಸಗ್ನ' (The Disrobing of Winter).

ಮತ್ತೆ ಆರಂಭವಾಗುವುದೇ ನಾಟಕ. ಕತ್ತಲಗವಿಯಲ್ಲಿರುವ ಭಯಂಕರ ಮುದುಕನೊಬ್ಬನನ್ನು ಹಿಡಿಯಬೇಕೆಂದು ಮಕ್ಕಳನೇಕರು ಹಟಮಾಡುವರು. ಆ ಮೇಲೆ 'ದಾದಾ' ಎಂಬ ಪಾತ್ರವು ಕವಿತೆಯಲ್ಲಿ ಸುಸ್ಪಷ್ಟವಾದ ಅರ್ಥ, ನೀತಿ, ತಪ್ಪದೆ ಇರಬೇಕೆಂದು ಉಪದೇಶಿಸುವುದು. ಈ ಪಾತ್ರದ ಮೂಲಕ ರವೀಂದ್ರನು ಪುರಾತನ ಭಾವನೆಗಳಲ್ಲಿ ಹಲವನ್ನು ಬಹಳ ಪರಿಹಾಸ್ಯಮಾಡುವನು. ಆ ಮೇಲೆ ಬರುವ ಅಂಧಗಾಯಕನು ತನ್ನ ಶರೀರ ಮನಸ್ಸು ಆತ್ಮಗಳನ್ನು ನೋಡಬಯಸು ವನು. ಇವನು ಬಹಳ ಮಧುರ ಗೀತಗಳನ್ನು ಹಾಡುವನು. ಪುಷ್ಪದೇವತೆಗಳು, ಯಕ್ಷಿಣಿಯರು, ದಕ್ಷಿಣಮಾರುತ, ವಸಂತ, ಯೌವನ, ಸೌಂದರ್ಯ ಮುಂತಾದ ಪಾತ್ರಗಳೆಷ್ಟೋ ನಾಟಕದಲ್ಲಿ ಬರುವುವು. ಮನುಷ್ಯ ಪಾತ್ರಗಳು ರಂಗಸ್ಥಳವನ್ನು ಬಿಟ್ಟೊಡನೆ ಉತ್ಸಾಹಪೂರಿತವಾದ ಹಾಡುಗಳನ್ನು ಹಾಡುತ್ತಾ, ನಾಟ್ಯ ವಾಡುತ್ತಾ ವನದೇವತೆಯರು ಪ್ರವೇಶಿಸುವರು. ಅವರು ಶಿಶಿರವೃದ್ಧನನ್ನು ಪರಿಹಾಸ್ಯಮಾಡುತ್ತಾ ಅವನ ವೇಷಭೂಷಣಗಳನ್ನು ಕಿತ್ತೊಗೆದು ವಸಂತನನ್ನಾಗಿ ಮಾಡುವರು. ಈ ನಾಟಕವನ್ನು ನೋಡಿ ಮುಖ್ಯವಾಗಿ ಬಾಲಕ ಬಾಲಿಕೆ ಯರು ವಿಶೇಷಾನಂದವನ್ನು ಹೊಂದುವರು. ಪ್ರಥಮ ಪ್ರದರ್ಶನದಲ್ಲಿ ರವೀಂದ್ರನೇ ಅಂಧಗಾಯಕನ ಪಾತ್ರವಹಿಸಿದನು. ಮಿಕ್ಕ ಪಾತ್ರಗಳನ್ನೆಲ್ಲ ಶಾಂತಿನಿಕೇತನದ ವಿದ್ಯಾರ್ಥಿಗಳು ಉತ್ಸಾಹದಿಂದ ನಟಿಸಿದರು. 1916ರಲ್ಲಿ ಬಂಕೂರಾ ಕ್ಷಾಮನಿವಾರಣಾ ನಿಧಿಸಂಗ್ರಹಕ್ಕಾಗಿ ಈ ನಾಟಕವನ್ನು ಪುನಃ ಕಲ್ಕತ್ತಾದಲ್ಲಿ ಅಭಿನಯಿಸಿದರು. ಆ ನಾಟಕವನ್ನು ನೋಡಿದವರು ರವೀಂದ್ರನ ನಟನೆ, ಹಾಡು ಹಾಗೂ ವನದೇವತೆಗಳ ಗೀತಗಳನ್ನು ಎಂದೂ ಮರೆಯಲಿಲ್ಲ. 'ಈ ನಾಟಕವು ವನ್ಯಸೌಂದರ್ಯವನ್ನು ನಗರಕ್ಕೆ ತಂದಿತು. ಮರಗಳೂ ಹೂಗಳೂ ದಕ್ಷಿಣ ಮಾರುತವೂ ಮಾನವನಂತೆ ಹಾಡತೊಡಗಿದುವೆಂದರೆ ಹೀಗೆಯೇ ಹಾಡಬಲ್ಲುವು' ಎಂದೊಬ್ಬ ವಿಮರ್ಶಕನು ನುಡಿದನು.

1916—1917ರಲ್ಲಿ ರವೀಂದ್ರನು ಮತ್ತೊಮ್ಮೆ ಜಪಾನ್ ಅಮೆರಿಕಾಗಳಿಗೆ ಪ್ರಯಾಣ ಬೆಳೆಸಿದನು. ಜಪಾನಿಗೆ ಬಂದಾಗ ಸೋದರೀ ರಾಷ್ಟ್ರದ ಕವಿಯೆಂದು ಸರಕಾರದವರೂ ಪ್ರಜೆಗಳೂ ಅವನನ್ನು ಆದರದಿಂದ ಸ್ವಾಗತಿಸಿದರು. ಅವನ ಗೌರವಾರ್ಥ ಸಭೆಗಳು ಜರಗಿದುವು. ಜಪಾನೀಯರು ಸೌಂದರ್ಯೋಪಾಸಕರು. ರವೀಂದ್ರನಿಗೆ ಇಲ್ಲಿ ಬಹಳ ಮಂದಿ ಕವಿಗಳ ಹಾಗೂ ಕಲಾವಿದರ ಸ್ನೇಹವಾ ಯಿತು. ಅವರ ಸೌಂದರ್ಯಾರಾಧನೆಯೇ ಅವರ ಧೀರತೆಗೆ ಕಾರಣವೆಂದೂ ಈ ಪಾಠವನ್ನು ಭಾರತೀಯರೂ ಕಲಿತುಕೊಳ್ಳಬೇಕೆಂದೂ ರವೀಂದ್ರನು ಭಾವಿಸಿ ದನು. 'ಈ ಸೌಂದರ್ಯಾರಾಧನೆಯೇ ಜಪಾನೀಯರ ಸ್ಥೈರ್ಯಕ್ಕೂ ವಿರಕ್ತಿಗೂ

ಕಾರಣ. ಸೌಂದರ್ಯಾನಂದದಿಂದಲೇ ನಿಜವಾದ ವಿರಕ್ತಿ ಹುಟ್ಟುವುದು. ಭಾರತೀಯರಾದ ನಮಗೆ ಬೇಕಾದುದು ತುಂಬುಜೀವನವಲ್ಲದೆ ವೈರಾಗ್ಯವಲ್ಲ.' ಎಂದು ಅವನು ಉಲ್ಲೇಖಿಸಿದನು.

ಜಪಾನೀಯರ ಸಂತೋಷ ಸಾಹಸಮಯ ಜೀವನವನ್ನು ಆತನು ಮೆಚ್ಚಿದನು. ಆದರೆ ಜಪಾನೀ ಸರಕಾರದ ಧೋರಣೆಯನ್ನು ಮೆಚ್ಚಲಿಲ್ಲ. ಆಗಲೇ ಅವರಿಗೆ ಚೀನಾದವರ ಮೇಲೆ ದ್ವೇಷಾಸೂಯೆಗಳು ಪ್ರಬಲವಾಗಿದ್ದುದನ್ನು ಕಂಡನು. ಅವರು ಮಲ್ಲಯುದ್ಧವನ್ನೂ ಕುಸ್ತಿ ಪಂದ್ಯಗಳನ್ನೂ ಪ್ರೋತ್ಸಾಹಿಸುವುದನ್ನು ನೆಚ್ಚಲಿಲ್ಲ. ಒಮ್ಮೆ ಯುವಕರಿಬ್ಬರು ಯಾವುದೋ ಕಾರಣಕ್ಕಾಗಿ ದಿನವಿಡೀ ಹೋರಾಡಿದರು. ಕೊನೆಯಲ್ಲಿ ಇಬ್ಬರೂ ಗಾಯಗೊಂಡು ಮಡಿದರು. ಅವರು ಹೋರಾಡಿದ ಸ್ಥಳವನ್ನು ಜಪಾನೀಯರು ಪವಿತ್ರ ಸ್ಥಳವೆಂದು ಭಾವಿಸಿ ಅವರ ಜ್ಞಾಪಕಾರ್ಥವಾಗಿ ಅಲ್ಲೊಂದು ಶಿಲಾಸ್ತಂಭವನ್ನು ನೆಟ್ಟರು. ಇದರ ಮೇಲೆ ರವೀಂದ್ರನು ಸುಂದರ ಹಾಡೊಂದನ್ನು ಬರೆಯಬೇಕೆಂದು ಕೇಳಿಕೊಂಡರು. ರವೀಂದ್ರನು ಈ ದುರಂತ ಘಟನೆಗೆ ಕನಿಕರಗೊಂಡನು. ದಿವ್ಯ ಪ್ರಯೋಜನಕ್ಕಾಗಿ ದೈವನಿರ್ಮಿತ ಮಾನವ ಜೀವಿತವನ್ನು ಈ ರೀತಿ ದುರುಪಯೋಗಪಡಿಸುವುದು ಆತನಿಗೆ ಒಗ್ಗಲಿಲ್ಲ. ಅಂದು ಅವನು ಬರೆದ ಪದ್ಯವು ಹೀಗಿದೆ:—

'ಅವರು ದ್ವೇಷಿಸಿ ಸತ್ತರೂ ಜನರವರ ಸ್ತೋತ್ರವಗೈದರು.
ದೇವ ನಾಚುತ ಹಸುರು ಹುಲ್ಲಲಿ ಅದನು ಮರೆಸಲು ಬಯಸಿದ.'

ರವೀಂದ್ರನು ಟೋಕಿಯೋ ವಿಶ್ವವಿದ್ಯಾಲಯದಲ್ಲಿ 'ರಾಷ್ಟ್ರೀಯತೆ'ಯ ಕುರಿತು ಹಲವು ಉಪನ್ಯಾಸಗಳನ್ನಿತ್ತನು. ಈ ಭಾಷಣಗಳಲ್ಲಿ ರಾಷ್ಟ್ರೀಯ ಅಹಂಭಾವದಿಂದಾಗುವ ದುಷ್ಪರಿಣಾಮಗಳನ್ನು ವಿವರಿಸಿ ನವೀನ ರಾಷ್ಟ್ರಗಳ ಜೀವನವನ್ನು ಟೀಕಿಸಿದನು. ಆಧುನಿಕ ಜೀವನದಲ್ಲಿರುವ ಮೂರು ಮುಖ್ಯ ಅನರ್ಥಗಳನ್ನು ಕುರಿತು ಆತನು ಹೀಗೆಂದನು:— ಮೊದಲನೆಯದು-ಜನಸಾಮಾನ್ಯರ ಶುಭವನ್ನು ಕೋರದೆ ಪ್ರಭುತ್ವವು ಕೇವಲ ಯಂತ್ರದಂತೆ ಕಾರ್ಯನಿರ್ವಹಿಸುವುದು; ಎರಡನೆಯದು— ಸಂಕುಚಿತ ಸ್ವಾರ್ಥಭಾವನೆಯಿಂದ ಸ್ವದೇಶ ಕ್ಷೇಮ ಲಾಭವನ್ನೇ ಬಯಸುತ್ತಾ ಅನ್ಯರ ಹಕ್ಕುಬಾಧ್ಯತೆಗಳನ್ನು ಕಡೆಗಣಿಸುವುದು. ಈ ಸಂದರ್ಭದಲ್ಲಿ ಚೀನಾದವರ ಮೇಲೆ ಜಪಾನೀಯರು ಕೈಕೊಂಡ ಕ್ರಮವನ್ನು ಬಹಿರಂಗವಾಗಿ ಖಂಡಿಸಿದನು. ಕೆಲವು ವರ್ಷಾನಂತರ ಇದೇ ವಿಷಯವನ್ನು ಆತನು ಭಾರತೀಯರಿಗೂ ಉದ್ಘೋಷಿಸಿದನು. 'ನನ್ನ ದೇಶಕ್ಕಿಂತಲೂ ಭಗವಂತನೇ ಶ್ರೇಷ್ಠವೆಂದು ನನ್ನ ಭಾವನೆ; ಹೀಗೆ ಹೇಳಿದೆನೆಂದು ನನ್ನನ್ನು ನಿಂದಿಸಬೇಡಿರಿ.'

ಇನ್ನು ಮೂರನೆಯದು—ಸಾಮಾಜಿಕ ಅನ್ಯಾಯ;–ಮಾನವಸಾಮಾನ್ಯರ ಜೀವನವನ್ನು ವೃದ್ಧಿಗೊಳಿಸದಿರುವುದು. ಜಪಾನಿನ ಬಡಕೂಲಿಗಾರರು ಸಾಕಷ್ಟು ಸಂಬಳವಿಲ್ಲದೆ, ಉತ್ತಮ ವಸತಿಗಳಿಲ್ಲದೆ ಗಂಟೆಗಟ್ಟಲೆ ದುಡಿಯುತ್ತಿದ್ದುದು ರವೀಂದ್ರನಿಗೆ ತಿಳಿದಿತ್ತು.

ರವೀಂದ್ರನು ಜಪಾನೀಯರಿಗೆ ಸನ್ಮಿತ್ರನಂತೆ, ಕಹಿಯಾದರೂ ಸತ್ಯವನ್ನೇ ಹೇಳಿದನು. ಆದರೆ ಅವರಿಗಿದು ರುಚಿಸಲಿಲ್ಲ. ಸರಕಾರವೂ ಪ್ರಜೆಗಳೂ ಅವನನ್ನು ಮತ್ತೆ ಗೌರವಿಸದೆ ಹೋದರು. ಇದರಿಂದ ಆತನ ಸಂದರ್ಶನದ ಉಳಿದ ದಿನಗಳು ಅಷ್ಟು ಸುಖಪ್ರದವಾಗಿರಲಿಲ್ಲ.

ಜಪಾನಿನಿಂದ ಸ್ವದೇಶಕ್ಕೆ ಮರಳಿದ ಬಳಿಕ ಯುದ್ಧ ಮುಗಿಯುವವರೆಗೂ ರವೀಂದ್ರನು ಭಾರತದಲ್ಲೇ ಇದ್ದನು. ಬಂಗಾಳದ ಶಾಲೆಗಳಲ್ಲಿ ಬಂಗಾಳಿಯಲ್ಲಿಯೇ ಶಿಕ್ಷಣವೀಯಬೇಕೆಂದು ಆತನು ಇನ್ನೂ ಚಳವಳ ಹೂಡುತಿದ್ದನು. ಈ ಸಮಯದಲ್ಲೇ 'ಗಿಳಿಪಾಠ'ವೆಂಬ ವ್ಯಂಗ್ಯ ಬರೆಹವನ್ನೂ ಬರೆದನು—ಸ್ವೇಚ್ಛೆಯಿಂದ ಹಾಡುತ್ತಾ ಹಾರಾಡುವ ಗಿಳಿಗೆ ಬಲವಂತಪಡಿಸಿ ಪಾಠಹೇಳುವರು. ಬಂಗಾರದ ಪಂಜರದಲ್ಲಿ ಬಂಧಿಸಿ, ರೆಕ್ಕೆಗಳನ್ನು ತುಂಡಿಸಿ, ಕಾಲುಗಳಿಗೆ ಸಂಕೋಲೆ ತೊಡಿಸಿ, ರಾಶಿರಾಶಿ ಪಠ್ಯ ಪುಸ್ತಕಗಳನ್ನು ಗೂಡಿನೊಳಗೆ ತುರುಕಿಸುವರು. ಕೊನೆಯಲ್ಲಿ ಗಿಳಿ ಸತ್ತುಬೀಳುವುದು. ತುರುಕಿಸಿದ ಕಾಗದಗಳು ಗಿಳಿಯ ಮೈಗೆ ತಾಗಿ ಶಬ್ದಿಸುವಾಗ ಎಲ್ಲರೂ 'ಗಿಳಿಪಾಠ' ಪೂರ್ಣವಾಯಿತೆಂದು ತೃಪ್ತಿಪಡುವರು!

ಸಾಹಿತ್ಯದಲ್ಲಿ, ವ್ಯಾವಹಾರಿಕ ಬಂಗಾಳಿಯಲ್ಲಿ ಬರೆಯುವವರಿಗೆಲ್ಲ ರವೀಂದ್ರನು ತುಂಬ ಸಹಾಯಮಾಡುತಿದ್ದನು. ಕಲ್ಕತ್ತದ ತನ್ನ ಮನೆಯಲ್ಲಿ ಬರೆಹಗಾರರ ಕೂಟ ಕೂಡುತಿತ್ತು. ರಾಜಕೀಯದಲ್ಲಿಯೂ ಆತನು ಪುನಃ ಪಾತ್ರವಹಿಸಿದನು. ಕಾಂಗ್ರೆಸ್ ಸಂಸ್ಥೆಯನ್ನು ಸೇರಿ ತನ್ನ ಸುಂದರ ಗೀತಗಳಿಂದ ಅಸಂಖ್ಯಾತ ಮಂದಿಯನ್ನು ಹುರಿದುಂಬಿಸಿದನು. 1918ರಲ್ಲಿ ರವೀಂದ್ರನ ಹಿರಿಯ ಮಗಳು ತೀರಿಕೊಂಡಳು. ಆತನು ಈ ದುಃಖದಲ್ಲಿ ಮುಳುಗಿದ್ದರೂ ಶಾಂತಿನಿಕೇತನದ ಕಾರ್ಯಕ್ರಮವು ಎಂದಿನಂತೆ ಶಾಂತರೀತಿಯಲ್ಲಿ ನಡೆಯಿತು. ದಿನ ಸಾಗಿದಂತೆ, ರವೀಂದ್ರನು ಪ್ರಪಂಚ ಶಾಂತಿಸ್ಥಾಪನೆಗೆ ಭಾರತವು ಹೇಗೆ ಸಹಕರಿಸಬಹುದೆಂಬುದನ್ನು ಯೋಚಿಸತೊಡಗಿದನು. 'ಪ್ರಪಂಚ ವಿಶ್ವವಿದ್ಯಾನಿಲಯ'ವನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿ 1918ರೊಳಗೆ 'ವಿಶ್ವಭಾರತಿ'ಯನ್ನು ಶಂಕುಸ್ಥಾಪನೆಮಾಡಿದನು. ವಿಶ್ವಭಾರತಿಯ ಕೆಲಸವು 1919ರಲ್ಲಿ ಆರಂಭವಾಯಿತು. ಇದಕ್ಕಿಂತ ಮೊದಲು ಈ ದೇಶದಲ್ಲಿ ಒಂದು ಅಪೂರ್ವ ದುರ್ಘಟನೆ ಸಂಭವಿಸಿತು.

1919, ಏಪ್ರಿಲ್ 13ರಂದು ಜಲ್ಲಿಯನ್‌ವಾಲಾಬಾಗ್‌ನಲ್ಲಿ ಸಮಾವೇಶ ಗೊಂಡ ಅಸಹಾಯಕರಾದ ಭಾರತೀಯರಲ್ಲಿ ನೂರಾರು ಮಂದಿಯನ್ನು ಜನ ರಲ್ ಡಯ್ಯರ್‌ನು ಗುಂಡಿಕ್ಕಿ ಕೊಲ್ಲಿಸಿದನು. ಎಷ್ಟೋ ಮಂದಿ ಗಾಯ ಗೊಂಡರು. ಪಂಜಾಬಿನಲ್ಲಿ 'ಮಾರ್ಶಲ್ ಲಾ' ಸಾರಲಾಯಿತು. ಈ ಸುದ್ದಿ ಯನ್ನು ಯಥಾವತ್ತಾಗಿ ಪತ್ರಿಕೆಗಳಲ್ಲಿ ಪ್ರಕಟಿಸಲು ಬಿಡಲಿಲ್ಲ. ಆದರೂ ಈ ವಾರ್ತೆ ರವೀಂದ್ರನ ಕಿವಿಗೆ ಬಿತ್ತು. ಆತನು ಉದ್ರೇಕಿತನಾಗಿ ಸರಕಾರದ ಹೇಯ ವರ್ತನೆಯನ್ನು ಬಲವಾಗಿ ಪ್ರತಿಭಟಿಸಿದನು. ಕೂಡಲೇ ಕಲ್ಕತ್ತೆಕ್ಕೆ ಹೋಗಿ, ಅಲ್ಲಿಯ ರಾಜಕೀಯ ಮುಂದಾಳುಗಳನ್ನು ಸಾರ್ವಜನಿಕ ಪ್ರತಿಭಟನೆ ಯನ್ನು ಆರಂಭಿಸುವಂತೆ ಸಮಜಾಯಿಸಿ, ತಾನು ಆ ಸಭೆಯ ಅಧ್ಯಕ್ಷನಾಗಿ ಮಾತಾಡುವಂತೆ ಭರವಸೆಯಿತ್ತನು. ಆದರೆ ಮುಂದಾಳುಗಳು ಇದಕ್ಕೊಪ್ಪ ಲಿಲ್ಲ. ಹೀಗಾಗಿ ತಾನೊಬ್ಬನೇ ಸರಕಾರವನ್ನು ಎದುರಿಸಲು ನಿಶ್ಚೈಸಿದನು. ತನ್ನ ದೇಶಬಾಂಧವರನೇಕರ ಹತ್ಯಾಕಾಂಡವನ್ನೆಸಗಿದ ಸರಕಾರವು 1915ರಲ್ಲಿ ತನಗಿತ್ತ 'ನೈಟ್‌ಹುಡ್' ಬಿರುದನ್ನು ತ್ಯಜಿಸಿದನು. ಪ್ರತ್ಯೇಕ ಗೌರವ ಚಿಹ್ನೆ ಇಲ್ಲದೆಯೇ ತನ್ನ ಬಂಧುಗಳ ಬಳಿ ನಿಲ್ಲಬಲ್ಲೆನೆಂದು ಹೇಳಿ ಬಿರುದನ್ನು ರಾಜ ಪ್ರತಿನಿಧಿಗೆ ಪತ್ರದೊಂದಿಗೆ ಹಿಂತಿರುಗಿಸಿದನು. ಮತ್ತೆಂದೂ ಈ ಬಿರುದನ್ನು ಬಳಸಲಿಲ್ಲ.

ಜಲ್ಲಿಯನ್‌ವಾಲಾಬಾಗ್ ದುರಂತವನ್ನು ರವೀಂದ್ರನು ಕೇವಲ ರಾಜ ಕೀಯ ದೃಷ್ಟಿಯಿಂದ ಮಾತ್ರವಲ್ಲ, ಮಾನವೀಯ ದೃಷ್ಟಿಯಿಂದಲೂ ನಿರೋಧಿಸಿ ದನು. ಇಂತಹ ಘೋರ ಕೃತ್ಯವು ಮಾನವ ಜಾತಿಗೆಲ್ಲ ಕಳಂಕಪ್ರಾಯವಾ ದುದು. ಎಲ್ಲ ಜನಾಂಗದವರೂ ಅನ್ಯೋನ್ಯ ಸಹಕರಿಸಬೇಕೆಂಬುದು ಆತನ ಅಭಿ ಪ್ರಾಯ. ಆದರೆ ಇಂತಹ ಘೋರ ಅನ್ಯಾಯವು ಮೈತ್ರಿಗೆ ಭಂಗವನ್ನುಂಟು ಮಾಡುವುದರಿಂದಲೇ ರವೀಂದ್ರನು ಅಷ್ಟೊಂದು ಕಠಿಣರೀತಿಯಲ್ಲಿ ವರ್ತಿಸಿದನು.

## ಅಧ್ಯಾಯ ೧೦.

## ವಿಶ್ವಭಾರತಿ

ಶಾಂತಿನಿಕೇತನದಲ್ಲಿ ರವೀಂದ್ರನು ಸ್ಥಾಪಿಸಿದ ಅಂತಾರಾಷ್ಟ್ರೀಯ ವಿಶ್ವ ವಿದ್ಯಾಲಯವೇ 'ವಿಶ್ವಭಾರತಿ'. ವಿಶ್ವವಿದ್ಯಾಲಯವೆಂಬ ಹೆಸರೇ ಪ್ರಪಂಚವಿಜ್ಞಾನ ಅಥವಾ 'ವಿಶ್ವ ಸಂಸ್ಕೃತಿ'ಯನ್ನು ಸೂಚಿಸುವುದು. 'ವಿಶ್ವಭಾರತಿ' ಪ್ರಪಂಚ

ಸಂಸ್ಕೃತಿಯನ್ನೂ ಭಾರತ ಸಂಸ್ಕೃತಿಯನ್ನೂ ಐಕ್ಯಗೊಳಿಸುವುದು. ಅದರ ಧ್ಯೇಯವೇ 'ಯತ್ರ ವಿಶ್ವಂ ಭವತಿ ಏಕನಿದಂ' ಎಂಬದು. ಅಂದರೆ 'ಸಮಸ್ತ ವಿಶ್ವ ಸಂಗಮ ಸ್ಥಾನವೇ ವಿಶ್ವಭಾರತಿ!'

ಯುದ್ಧಾನಂತರ ವಿಶ್ವಭಾರತಿಯನ್ನು ಸ್ಥಾಪಿಸಿದ ಉದ್ದೇಶವನ್ನು ರವೀಂದ್ರನೇ ವಿಶದೀಕರಿಸಿರುವನು. ಶಾಂತಿನಿಕೇತನವು ಶಾಶ್ವತವಾಗಿ ನೆಲೆಗೊಂಡ ಬಳಿಕ, ಇದಕ್ಕಿಂತಲೂ ವಿಶಾಲವಾದ ದೃಕ್ಪಥದಲ್ಲಿ, ಅಂತಾರಾಷ್ಟ್ರೀಯ ಸಂಸ್ಕೃತಿಗಳನ್ನು ಏಕೀಭವಿಸುವ ವಿದ್ಯಾಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಸ್ಫೂರ್ತಿಯುಂಟಾಯಿತು. ಕ್ರಮಕ್ರಮವಾಗಿ ಆ ಸ್ಫೂರ್ತಿಯೇ ವಿಶ್ವಭಾರತಿಯಾಗಿ ರೂಪುಗೊಳ್ಳಲಾರಂಭಿಸಿತು.

ಭಾರತೀಯ ಸಾಹಿತ್ಯದಲ್ಲಿ ವರ್ಣಿತವಾದ ಪ್ರಾಚೀನ ನಲಂದಾ ವಿಶ್ವವಿದ್ಯಾಲಯವು ರವೀಂದ್ರನನ್ನು ಮರುಳುಗೊಳಿಸಿತ್ತು. ಹಿಂದೂ ಸಂಸ್ಕೃತಿ ವಿಜ್ಞಾನಗಳನ್ನು ಚೆನ್ನಾಗಿ ಪ್ರತಿಬಿಂಬಿಸುವ ಅಂತಾರಾಷ್ಟ್ರೀಯ ವಿಶ್ವವಿದ್ಯಾಲಯವನ್ನು ಮರಳಿ ಸ್ಥಾಪಿಸುವುದು ಆಗತ್ಯವೆಂದು ಆತನು ಮನಗಂಡನು. ಭಾರತ ದೇಶದಲ್ಲಿದ್ದ ಆಧುನಿಕ ವಿಶ್ವವಿದ್ಯಾಲಯಗಳೆಲ್ಲ ಪಾಶ್ಚಾತ್ಯ ಪದ್ಧತಿಗಳನ್ನು ಅನುಕರಿಸಿದುವುಗಳಾದುದರಿಂದ ಅಲ್ಲಿ ಭಾರತ ವಿಜ್ಞಾನ ಸಂಪತ್ತು ಪ್ರತಿಬಿಂಬಿಸಿರಲಿಲ್ಲ. ರವೀಂದ್ರನು ಕ್ರಮವಾಗಿ ತನ್ನ ವಿಶ್ವವಿದ್ಯಾಲಯದಲ್ಲಿ ಕೇವಲ ಭಾರತ ಸಂಸ್ಕೃತಿಯೇ ಅಲ್ಲದೆ ಪೌರಸ್ತ್ಯ ದೇಶಗಳ ವಿಜ್ಞಾನ ಸಂಸ್ಕೃತಿಗಳನ್ನು ರೂಪಿಸಲು ಪ್ರಯತ್ನಿಸಿದನು. 'ಪೌರಸ್ತ್ಯ ಸಂಸ್ಕೃತಿಗಳನ್ನೆಲ್ಲ ಏಕೀಭವಿಸುವ ವಿದ್ಯಾಮಂದಿರವನ್ನು ಸ್ಥಾಪಿಸಬೇಕೆಂದಿದ್ದೇನೆ,' ರವೀಂದ್ರನೆಂದನು. ಮುಖ್ಯವಾಗಿ ಆತನು ಭಾರತ ನಾಗರಿಕತೆ, ದೂರ ಪೂರ್ವ ದೇಶಗಳ ಸಂಸ್ಕೃತಿ, ಹಾಗೂ ಇಸ್ಲಾಮ್—ಈ ತ್ರಿವೇಣೀ ಸಂಗಮವನ್ನು ಕುರಿತು ಚಿಂತಿಸಿದನು.

ವಿಶ್ವಮಾನವ ಸೌಭ್ರಾತೃತ್ವವನ್ನು ನೆಲೆಗೊಳಿಸುವುದಕ್ಕಾಗಿಯೇ ಶಾಂತಿನಿಕೇತನವು ಸ್ಥಾಪಿತವಾಯಿತೆಂಬುದನ್ನು ಈ ಮೊದಲೇ ತಿಳಿದಿರುವೆವು. ಅಂಡ್ರೂಸ್ ಮತ್ತು ಪಿಯರ್ಸನ್‌ರೆಂಬ ಆತನ ಇಬ್ಬರು ಆಂಗ್ಲ ಮಿತ್ರರು ಈ ಕಾರ್ಯದಲ್ಲಿ ತುಂಬ ನೆರವಾದರು. 1920ರಲ್ಲಿ ರವೀಂದ್ರನು ಮರಳಿ ಯುರೋಪಿನ ಎಲ್ಲಾ ರಾಷ್ಟ್ರಗಳಿಗೂ ಸಂದರ್ಶನವಿತ್ತನು. ಹೋದಲ್ಲೆಲ್ಲ ಆತನಿಗೆ ಪ್ರಚಂಡ ಸ್ವಾಗತ ದೊರೆಯಿತು. ಈ ಅಖಂಡ ಸ್ವಾಗತದಿಂದಾಗಿ ಆತನು ತನ್ನ ಬಾಧ್ಯತೆ ಅಧಿಕವಾದುದೆಂದೆಣಿಸಿದನು. ರಾಜಕೀಯ, ಜಾತಿ, ಮತ, ಪಂಥಗಳಿಂದ ದೂರವಾದ ಪೂರ್ವಪಶ್ಚಿಮ ದೇಶಗಳ ಐಕ್ಯವನ್ನು ಸಾಧಿಸಬೇಕೆಂದು ನಿರ್ಧರಿಸಿದನು. ಇದ

ರಿಂದ ಸತ್ಯಪ್ರೇಮಿಗಳಿಗೆ ಹಾಗೂ ವಿಶ್ವಮಾನವರಿಗೆ ಶಾಂತಿನಿಕೇತನದಲ್ಲಿ ಪ್ರವೇಶ ದೊರಕಿತು.

ರವೀಂದ್ರನ ಆದರ್ಶವನ್ನನುಸರಿಸಿ ವಿಶ್ವಭಾರತಿಯಲ್ಲಿ ಮುಖ್ಯವಾಗಿ ಮೂರು ವಿಷಯಗಳನ್ನು ಕುರಿತು ಶಿಕ್ಷಣವೀಯಲಾಗುತ್ತಿದೆ. ಮೊದಲನೆಯದು ಭಾರತಕ್ಕೆ ಸಂಬಂಧಿಸಿದುದು. ಭಾರತೀಯ ನಾಗರಿಕತೆ, ಸಂಪ್ರದಾಯ, ಸಾಹಿತ್ಯ ಸಂಗೀತ ಮುಂತಾದುವುಗಳನ್ನು ವಿದ್ಯಾರ್ಥಿಗಳು ಚೆನ್ನಾಗಿ ತಿಳಿದುಕೊಳ್ಳಬೇಕೆಂದು ರವೀಂದ್ರನು ಆಶಿಸಿದನು. ಆದರೆ ಇಷ್ಟರಿಂದಲೇ ತೃಪ್ತನಾಗಲಿಲ್ಲ. ತಾನು ವಂಗದೇಶೀಯನಾದರೂ ವಂಗದೇಶ ಸಂಸ್ಕೃತಿಯನ್ನಷ್ಟೇ ಗೌರವಿಸಲಿಲ್ಲ. ಹಿಂದೂ ದೇಶದ ಎಲ್ಲ ಪ್ರಾಂತಗಳ ಭಾಷೆಗಳನ್ನು, ಸಂಪ್ರದಾಯಗಳನ್ನು, ವಿಜ್ಞಾನಗಳನ್ನು ಸಮಾನವಾಗಿ ಗೌರವಿಸಿದನು. ಎಲ್ಲರೂ ಒಂದೇ ಸ್ಥಳದಲ್ಲಿದ್ದು ಒಂದಾಗಿ ಆಹಾರ ಸೇವನೆ ಮಾಡುವರು. ಒಂದು ಪ್ರಾಂತದವರ ಅಡುಗೆಯನ್ನು ಮಿಕ್ಕ ಪ್ರಾಂತದವರು ರುಚಿನೋಡಿ ಆನಂದಿಸುವರು. ಸಂಗೀತ ಶಾಲೆಯಲ್ಲಿ ತಿರುವಾಂಕೂರಿನ ಕಥಕ್ಕಳಿಯೊಂದಿಗೆ ಅಸ್ಸಾಮ್ ದೇಶದ ಮಣಿಪುರಿ ನೃತ್ಯವೂ ನಡೆಯುವುದು. ಮಕ್ಕಳು ರವೀಂದ್ರನ ನೂತನ ಬಂಗಾಳೀ ಸಂಗೀತದೊಂದಿಗೆ ಶಾಸ್ತ್ರೀಯ ಸಂಗೀತಾಭ್ಯಾಸವನ್ನೂ ಮಾಡುವರು. ಕಲಾಶಾಲೆಯಲ್ಲಿ ಎಲ್ಲ ಪ್ರಾಂತಗಳ ವರ್ಣಚಿತ್ರಗಳು, ಕುಸುರಿ ಕೆಲಸಗಳು, ಮಡಕೆಗಳು, ಹೊಲಿಗೆ ಕೆಲಸಗಳು, ಪ್ರದರ್ಶಿತವಾಗಿವೆ. ಇವನ್ನು ನೋಡಿ ಎಲ್ಲರೂ ಆನಂದಿಸಬಹುದು. ವಿದ್ಯಾರ್ಥಿಗಳು ಸಂಸ್ಕೃತ, ಹಿಂದಿ, ಪರ್ಷಿಯನ್ ಮುಂತಾದ ಭಾಷೆಗಳನ್ನು ಕಲಿತು ಪ್ರಾಚೀನ ಹಿಂದೂ ಸಂಸ್ಕೃತಿಯ ಕುರಿತು ಸಂಶೋಧನೆ ಮಾಡುವರು. ತಾವು ಶೋಧಿಸಿದ ಹೊಸಹೊಸ ವಿಷಯಗಳನ್ನು ಕುರಿತು ಆಗಾಗ ಉಪನ್ಯಾಸ ಮಾಡುವರು. ವಿಶ್ವಭಾರತಿಗೆ ಸಂದರ್ಶನವಿತ್ತ ಅತಿಥಿಗಳೂ ಸುಮ್ಮಗೆ ಹಿಂದಿರುಗಲು ಸಾಧ್ಯವಿಲ್ಲ! ತಂತಮ್ಮ ವಿಶೇಷ ಜ್ಞಾನಾನುಭವಗಳನ್ನು ಮಕ್ಕಳಿಗೆ ಹಂಚಬೇಕು. ಕವಿಗಳಾದರೆ ವಿದ್ಯಾರ್ಥಿಗಳ ಮುಂದೆ ಹಾಡಬೇಕು; ತಮ್ಮ ಪ್ರಾಂತೀಯ ಸಾಹಿತ್ಯದ ಕುರಿತು ವಿವರಿಸಬೇಕು. ಗಾಯಕನು ಹಾಡಬೇಕು; ವೈಣಿಕನು ವೀಣೆಯನ್ನು ನುಡಿಸಬೇಕು. ಈ ಪ್ರಕಾರವಾಗಿ ವಿಶ್ವಭಾರತಿಯಲ್ಲಿ ಎಲ್ಲ ಪ್ರಾಂತಗಳ ಸಂಸ್ಕೃತಿ ಮೇಳವಿಸಲು ಅವಕಾಶವಿರುವುದು.

ಎರಡನೆಯದು ಏಷ್ಯಾಖಂಡಕ್ಕೆಲ್ಲ ಸಂಬಂಧಿಸಿದುದು. ಪರ್ಷಿಯ, ಇಂಡಿಯ, ಸಿಲೋನ್, ಬರ್ಮ, ಮಲಯ, ಟಿಬೆಟ್, ಚೈನ, ಜಪಾನ್ ದೇಶಗಳು ಒಂದೇ ಖಂಡಕ್ಕೆ ಸೇರಿದುವು. ಸಾವಿರಾರು ವರ್ಷಗಳಿಂದ ಯಾತ್ರಿಕರು, ವ್ಯಾಪಾರಿಗಳು, ಮತಬೋಧಕರು, ಈ ದೇಶಗಳಿಗೆಲ್ಲ ಹೋಗಿ ಬರುತಿದ್ದರು.

ಚೈನ ಮತ್ತು ಭಾರತಗಳೊಳಗಿನ ನಾಗರಿಕತೆಗಳು ಅತಿ ಪುರಾತನವಾದುವು. ಗೌತಮ ಬುದ್ಧನ ಉಪದೇಶವು ಹಿಂದೂದೇಶದಲ್ಲಿ ಪ್ರಾರಂಭವಾಗಿ ಏಷ್ಯಾ ಖಂಡವೆಲ್ಲ ವ್ಯಾಪಿಸಿತ್ತು. ಈ ಕಾರಣದಿಂದ ವಿವಿಧ ದೇಶಗಳ ಮಧ್ಯೆ ಹೆಚ್ಚಿನ ಸಂಬಂಧವಿತ್ತು. ಭಾರತೀಯರು ಪಾಶ್ಚಾತ್ಯದೇಶದವರೊಂದಿಗಿಂತಲೂ ಅಧಿಕ ವಾಗಿ ಇವರೊಡನೆ ಕಲೆತುಕೊಳ್ಳಬಲ್ಲರು.

ಆದುದರಿಂದ ಈ ದೇಶಗಳ ವಿಜ್ಞಾನವನ್ನು ಕೂಡ ರವೀಂದ್ರನು ವಿಶ್ವ ಭಾರತಿಯಲ್ಲಿ ಸ್ಥಾಪಿಸಿದನು. ಅವನು ನಿರ್ಮಿಸಿದ ಚೀನಾಭವನವು ಬಹಳ ಅಭಿವೃದ್ಧಿಗೊಂಡಿತು. 1921ರಲ್ಲಿ ಸಿಲ್ವೈನ್ ಲೆವಿ ಎಂಬೊಬ್ಬ ಪೌರಸ್ತ್ಯ ಭಾಷೆ ಗಳಲ್ಲಿ ನುರಿತ ಫ್ರೆಂಚ್ ವಿದ್ವಾಂಸನು ಚೀನಾ, ಟಿಬೆಟ್ ನಾಗರಿಕತೆಗಳನ್ನು ಬೋಧಿಸುವುದರಲ್ಲಿ ರವೀಂದ್ರನಿಗೆ ಸಹಾಯಕನಾಗಿ ಬಂದನು. ಎರಡು ಮೂರು ವರ್ಷಗಳ ತರುವಾಯ ರವೀಂದ್ರನು ಚೀನಾದೇಶಕ್ಕೆ ಹೋದಾಗ ಹಲವರು ಅವನ ಮಿತ್ರರಾದರು. ಚೀನಾ ಸಂಸ್ಕೃತಿಯ ಕುರಿತು ಬಹಳ ಅಭಿಮಾನ ತಾಳಿ ದನು. ವಿಶ್ವಭಾರತಿಯ ಚೀನಾ ಭವನದಲ್ಲಿ ಇಂದು ಚೀನಾ ಟಿಬೆಟ್‌ದೇಶಗಳ ಅನೇಕ ಗ್ರಂಥಗಳಿವೆ. ಬಹಳ ಮಂದಿ ಚೀನಾ ಟಿಬೆಟ್ ಭಾರತೀಯ ವಿದ್ವಾಂಸರು ಇದರ ಅಭಿವೃದ್ಧಿಗಾಗಿ ಶ್ರಮವಹಿಸುತಿದ್ದಾರೆ. ಪ್ರತಿವರ್ಷ ಅನೇಕ ವಿದ್ಯಾರ್ಥಿಗಳು ಚೀನಾದಿಂದ ಶಾಂತಿನಿಕೇತನಕ್ಕೆ ಶಿಕ್ಷಣಕ್ಕಾಗಿ ಬರುತ್ತಾರೆ.

ಕಲಾಕೇಂದ್ರ ಪ್ರದರ್ಶನ ಮಂದಿರದಲ್ಲಿ ಜಪಾನ್, ಚೀನ, ಮಲಯ, ತಾಯ್‌ಲಾಂಡ್, ಜಾವ, ಸುಮಾತ್ರ ಮೊದಲಾದ ದೇಶಗಳಿಗೆ ಸಂಬಂಧಿಸಿದ ಸುಂದರ ವಸ್ತುಗಳೆಷ್ಟೋ ಇವೆ. ಈ ದೇಶಗಳಿಂದ ವಿದ್ಯಾರ್ಥಿಗಳು ಆಗಾಗ ವಿಶ್ವಭಾರತಿಗೆ ಬರುತ್ತಿರುವುದರಿಂದ ಯಾವ ದೇಶವೂ ತನ್ನ ಭಾವನೆ, ಕಲೆ, ನಾಗ ರಿಕತೆಯಲ್ಲಿ ಇತರ ದೇಶಗಳಿಂದ ಪ್ರತ್ಯೇಕವಾಗಿರದೆ ಒಂದು ಇನ್ನೊಂದರಿಂದ ಎಷ್ಟೋ ವಿಷಯಗಳನ್ನು ಕಲಿಯಲಿದೆ ಎಂಬುದನ್ನು ಅರಿತುಕೊಳ್ಳಬಹುದು. ಏಷ್ಯಾ ಖಂಡದ ಚರಿತ್ರೆಯನ್ನವಲೋಕಿಸಿದರೆ ಅಲ್ಲಿನ ಭಿನ್ನಭಿನ್ನ ರಾಷ್ಟ್ರಗಳೊಳ ಗಿದ್ದ ಅನ್ಯೋನ್ಯ ಋಣಾನುಬಂಧವು ವೇದ್ಯವಾಗದಿರದು.

ಮೂರನೆಯದು ಏಷ್ಯಾ, ಯುರೋಪ್, ಅಮೇರಿಕಾ ಮೊದಲಾದ ಪಾಶ್ಚಾತ್ಯ ರಾಷ್ಟ್ರಗಳಿಗೆ ಸಂಬಂಧಿಸಿದುದು. ಆರ್ಯರ ಕಾಲದಿಂದಲೂ ಭಾರತ ದೇಶದ ಮೇಲೆ ದಂಡೆತ್ತಿ ಬಂದವರೆಲ್ಲರೂ ಭಾರತೀಯ ನಾಗರಿಕತಾಭಿವೃದ್ಧಿಗೆ ಒಂದಲ್ಲೊಂದು ರೀತಿಯಿಂದ ಉಪಕಾರಮಾಡದಿರಲಿಲ್ಲ. 'ಶಾಂತಿನಿಕೇತನ ವೃಕ್ಷವು ತನ್ನ ಬೇರುಗಳ ಮೂಲಕ ಪಾಶ್ಚಾತ್ಯ ದೇಶದ ಸಾರವನ್ನು ಹೀರದೆ ಯೋಗ್ಯ ಫಲಪುಷ್ಪಗಳಿಂದ ಕಂಗೊಳಿಸಲಾರದು' ಎಂದು ರವೀಂದ್ರನು ಒಮ್ಮೆ

ನುಡಿದನು. ಅಮೃತಸರ ದುರಂತದಿಂದಾಗಿ ಆತನ ಮನಸ್ಸು ಖೇದಗೊಂಡಿತ್ತಾದರೂ ಪಾಶ್ಚಾತ್ಯ ನಾಗರಿಕತೆಯಲ್ಲಿದ್ದ ಔನ್ನತ್ಯವನ್ನು ಮರೆಯಲಿಲ್ಲ. ಆತ್ಮ ವಿಕಾಸವಾಗದೆ ಭೌತಿಕ ಬಲವು ಲಭಿಸದು. ಪಾಶ್ಚಾತ್ಯ ನಾಗರಿಕತೆ, ಸಾಹಸ, ಶ್ರದ್ಧೆ, ವಿಚಕ್ಷಣತೆ, ವೈಜ್ಞಾನಿಕ ತಿಳುವಳಿಕೆಗಳ ಸತ್ಫಲ. ರವೀಂದ್ರನು ಪಾಶ್ಚಾತ್ಯ ಅಧ್ಯಾಪಕರನ್ನೂ ವಿದ್ಯಾರ್ಥಿಗಳನ್ನೂ ವಿಶ್ವಭಾರತಿಗೆ ಸ್ವಾಗತಿಸಿದನು. ಆರಂಭದ ಇಪ್ಪತ್ತು ವರ್ಷಗಳಲ್ಲಿ ಯುರೋಪ್ ಮೊದಲಾದ ದೇಶಗಳಿಂದ ಬಹಳ ಮಂದಿ ಬಂದು ವಿಶ್ವಭಾರತಿಯನ್ನು ನಿಜವಾಗಿಯೂ 'ಪ್ರಪಂಚ ವಿಶ್ವವಿದ್ಯಾನಿಲಯ'ವನ್ನಾಗಿ ಮಾಡುವುದರಲ್ಲಿ ಸಹಾಯಕರಾದರು.

ವಿಶ್ವಭಾರತಿಯಲ್ಲಿ ಜಾತಿಮತಭೇದಗಳಿಲ್ಲ. ಎಲ್ಲಾ ಜಾತಿಯವರೂ ಒಡನುಂಡು ಒಡವಳೆದು ಒಡನಾಡಿಗಳಾಗಿ ಬಾಳುವರು. ಆದರೂ ರವೀಂದ್ರನು ಎಲ್ಲಾ ಮತಗಳೂ ಒಂದೇ ಎಂಬುದನ್ನು ನಂಬಲಿಲ್ಲ. ಪ್ರತಿಯೊಂದು ಮತದಲ್ಲಿಯೂ ಪ್ರತ್ಯೇಕ ಸತ್ಯವು ಕೂಡಿದೆ ಎಂದು ಅವನು ಭಾವಿಸಿದನು. ವಿಶ್ವಭಾರತಿಯ ಪ್ರತಿಯೊಬ್ಬನೂ ತನ್ನ ಮತವನ್ನೂ ಇತರ ಮತಗಳನ್ನೂ ಸಮಾನವಾಗಿ ಎಣಿಸತಕ್ಕದ್ದೆಂದೂ ತನ್ನ ಮತವಿಶೇಷಗಳನ್ನು ಅನ್ಯರಿಗೆ ತಿಳಿಸಬೇಕೆಂದೂ ರವೀಂದ್ರನು ಕೋರಿದನು. ಪ್ರಪಂಚದ ಪ್ರಮುಖ ಮತಸ್ಥಾಪಕರ ವಾರ್ಷಿಕೋತ್ಸವವನ್ನು ತಪ್ಪದೆ ಶಾಂತಿನಿಕೇತನದಲ್ಲಿ ಆಚರಿಸುವ ವ್ಯವಸ್ಥೆಯನ್ನು ಮಾಡಿದನು. ಇದರಿಂದಾಗಿ ವಿದ್ಯಾರ್ಥಿಗಳು ಸರ್ವಧರ್ಮ ತತ್ವಗಳನ್ನು ಸುಲಭವಾಗಿ ತಿಳಿದುಕೊಳ್ಳುತ್ತಿದ್ದರು.

ಶಾಂತಿನಿಕೇತನವನ್ನು ಸ್ಥಾಪಿಸಿದ ಇಪ್ಪತ್ತು ವರ್ಷಗಳ ಅನಂತರ 1921ರಲ್ಲಿ ವಿಶ್ವಭಾರತಿ ಸ್ಥಾಪಿಸಲಾಯಿತು. ಇದರ ಪ್ರಾರಂಭೋತ್ಸವಾವಸರದಲ್ಲಿ ರವೀಂದ್ರನು ವಿಶ್ವಭಾರತಿಯ ಆದರ್ಶವನ್ನೂ ಆಶಯವನ್ನೂ ಕುರಿತು ಮಾತನಾಡಿದನು. ಪೂರ್ವಕಾಲದಲ್ಲಿ ಪ್ರಯಾಣಸೌಕರ್ಯಗಳಿಲ್ಲದೆ ಒಂದೆಡೆಯಿಂದ ಇನ್ನೊಂದೆಡೆಗೆ ಹೋಗಲು ಕಷ್ಟಕರವಾಗಿತ್ತು. ಆಗ ಒಂದು ದೇಶದವರಿಗೆ ಇನ್ನೊಂದು ದೇಶದವರೊಂದಿಗೆ ಸಂಪರ್ಕವಿಲ್ಲದೆ ಅಲ್ಲಲ್ಲಿ ಪ್ರತ್ಯೇಕ ನಾಗರಿಕತೆ ಅಭಿವೃದ್ಧಿಗೊಂಡಿತು. ಈಗ ಅಂತಹ ಕಾಲವಲ್ಲ. ಎಲ್ಲಾ ರಾಷ್ಟ್ರಗಳಿಗೂ ಸುಲಭವಾಗಿ ಹೋಗಿ ಬರಲು ಸೌಕರ್ಯವಿದೆ. ಇತರರೊಂದಿಗೆ ಪರಿಚಯಮಾಡಿಕೊಳ್ಳುವುದಲ್ಲದೆ ಅವರ ಒಳಿತುಕೆಡಕುಗಳನ್ನು ಗ್ರಹಿಸಿಕೊಳ್ಳಬಹುದು. ನಾಲ್ಕು ಮಂದಿಯೊಂದಿಗೆ ಕಲೆತು ಸಹಕರಿಸದ ವ್ಯಕ್ತಿಗೆ ಇಂದಿನ ಪ್ರಪಂಚದಲ್ಲಿ ಸ್ಥಾನವಿಲ್ಲ. ಆಧುನಿಕ ಯುಗದಲ್ಲಿ ವಿಶಾಲದೃಷ್ಟಿ ಅತ್ಯಗತ್ಯ.

'ಭಿನ್ನಭಿನ್ನ ನಾಗರಿಕತೆ ಸಂಪ್ರದಾಯಗಳನ್ನನುಸರಿಸುತ್ತಿರುವ ಜನರು ಒಂದೇ ಕಡೆಯಲ್ಲಿ ವಾಸಮಾಡಲು ಯೋಗ್ಯವಾದ ವಿಶ್ವಭಾರತಿಯನ್ನು ನಾನು ಸ್ಥಾಪಿಸಿದೆ. ಇಂತಹ ಮಹೋನ್ನತ ಕಾರ್ಯವನ್ನು ಪ್ರಾರಂಭಿಸಲು ಇದು ಬಹಳ ಚಿಕ್ಕ ಸ್ಥಳವೆಂದು ನೀವು ಭಾವಿಸಬಹುದು. ಆದರೆ ಇದಕ್ಕಾಗಿ ನಾನು ಭಯಪಡುವುದಿಲ್ಲ. ಚಿಕ್ಕಮಕ್ಕಳು ಮಾನವರಾಗಿ ಬೆಳೆಯುವಂತೆ, ಉನ್ನತ ಭಾವನೆಗಳೂ ಕ್ರಮವಾಗಿ ಬೆಳೆಯುವುವು. ವಿಶ್ವಭಾರತಿ ಒಂದು ದೊಡ್ಡ ಭಾವನೆ. ಅದು ಸುಸ್ಥಿರವಾದ ಸ್ಥಳದಲ್ಲಿ ಎಲ್ಲ ಸಜೀವ ವಸ್ತುಗಳಂತೆ ಕ್ರಮವಾಗಿ ಬೆಳೆಯುವುದು. ಬಾಹ್ಯಾಡಂಬರಗಳಾದ ಭವ್ಯಮಂದಿರಗಳೂ ಬಹಳಷ್ಟು ಐಶ್ವರ್ಯವೂ ಮಾನವನ ವಿಕಾಸತೆಗೆ ಕಾರಣವೆಂದು ಕೆಲವರು ಭಾವಿಸಬಹುದು. ಅಂಥವರು ಸತ್ಯಪ್ರಭಾವವನ್ನು ಗುರುತಿಸಲಿಲ್ಲವೆಂದು ಹೇಳಬಲ್ಲೆನು' ರವೀಂದ್ರನೆಂದನು. ತನ್ನ ಈ ಯೋಗ್ಯಪ್ರಯತ್ನವು ಒಂದು ವೇಳೆ ವಿಫಲವಾಗಬಹುದೋ ಎಂಬ ಶಂಕೆಯೂ ಅವನನ್ನು ಬಾಧಿಸಲಿಲ್ಲ. ಪ್ರಯತ್ನಿಸುವುದು ಮಾತ್ರವೇ ತನ್ನ ಕರ್ತವ್ಯವೆಂದು ಭಾವಿಸಿದನು. 'ಭಗವಂತನು ನಮಗಿತ್ತ ಬಾಧ್ಯತೆಗಳನ್ನು ಗ್ರಹಿಸಿ ನಮ್ಮ ಕರ್ತವ್ಯಗಳನ್ನು ನೆರವೇರಿಸಲು ಮನಃಪೂರ್ತಿಯಾಗಿ ಪ್ರಯತ್ನಿಸಬೇಕೆಂದೂ ಜಯಾಪಜಯಗಳು ದೈವಾಯತ್ತವೆಂದೂ' ಆತನು ಸಾರಿದನು.

ಕವಿ ಕಂಡ ವಿಶ್ವಭಾರತಿಯ ಕನಸು ಇನ್ನೂ ಪೂರ್ಣವಾಗಿಲ್ಲ. 1921ರಲ್ಲಿ ಜನಿಸಿದ ಮಹೋನ್ನತ ವಿಶ್ವಭಾರತಿ ಇನ್ನೂ ಬೆಳೆಯುತ್ತಲೇ ಇದೆ. ಬಾಧ್ಯತೆ ವಹಿಸಿ ಕೆಲಸಮಾಡುವ ಯೋಗ್ಯ ವ್ಯಕ್ತಿಗಳು ಸಿಗದಿದ್ದುದರಿಂದ ರವೀಂದ್ರನು ನೂತನ ಶಾಖೆಗಳನ್ನು ತೆರೆಯಲಿಲ್ಲ. ಆದುದರಿಂದಲೇ 'ಚೀನಾಸಂಸ್ಕೃತಿ'ಯ ಶಾಖೆಯೊಂದನ್ನಲ್ಲದೆ ಇತರ ಶಾಖೆಗಳನ್ನು ವಿಶ್ವಭಾರತಿಯಲ್ಲಿ ಸ್ಥಾಪಿಸಿಲ್ಲ. ಹಿಂದೂ ಪಾಶ್ಚಾತ್ಯ ಸಂಗೀತ ಸಂಪ್ರದಾಯಗಳ ಸಾಮ್ಯವೈಷಮ್ಯಗಳನ್ನು ತುಲನೆಮಾಡುವಂತಹ ಅಂತಾರಾಷ್ಟ್ರೀಯ ಸಂಗೀತ ಶಾಖೆಯನ್ನು ಇನ್ನೂ ಆರಂಭಿಸಲಿಲ್ಲ. ಆದರೆ ಇತರ ವಿಷಯಗಳಲ್ಲಿ ಕೇವಲ ಅಲ್ಪಾವಕಾಶದಲ್ಲಿ 'ವಿಶ್ವಭಾರತಿ' ಸಾಧಿಸಿದ ಮಹತ್ಕಾರ್ಯಗಳನ್ನು ಪರಿಶೀಲಿಸಿದಲ್ಲಿ ರವೀಂದ್ರನ ಅಪ್ರತಿಮ ಪ್ರತಿಭೆಯನ್ನು ನಾವು ಮೆಚ್ಚಲೇ ಬೇಕು.

1921ರ ರಾಜಕೀಯ ಅಸಹಕಾರ ಚಳವಳಿಯ ಕಾಲದಲ್ಲೇ ರವೀಂದ್ರನ 'ವಿಶ್ವಭಾರತಿ' ಸ್ಥಾಪನೆಯೂ ಆಯಿತು. 1915ರಲ್ಲಿ ಮಹಾತ್ಮನು ಶಾಂತಿ ನಿಕೇತನಕ್ಕೆ ಬಂದಂದಿನಿಂದ ಮಹಾಪುರುಷರಿಬ್ಬರ ಮೈತ್ರಿಯು ಬಲಿಯಿತು. ಇಬ್ಬರೂ ತಮಗೆ ತೋರಿದ ರೀತಿಯಲ್ಲಿ ದೇಶಸೇವೆಯಲ್ಲಿ ನಿರತರಾಗಿ ಅನ್ಯೋನ್ಯ

ಮೆಚ್ಚಿಕೊಂಡರು. ಅಸಹಕಾರ ಚಳವಳಿಯ ಕಾಲದಲ್ಲಿ ಮಹಾತ್ಮನು ಬರೆದ ಲೇಖನವೊಂದರಲ್ಲಿ 'ಮಹಾರಕ್ಷಕ ಭಟ'ನೆಂಬ ಬಿರುದನ್ನು ರವೀಂದ್ರನಿಗಿತ್ತು, ಈತನು ದೇಶಕ್ಷೇಮವನ್ನು ಸದಾ ದೃಷ್ಟಿಯಲ್ಲಿಟ್ಟು, ದೇಶಕ್ಕೆ ಬಾಹ್ಯಾಂತರಿಕ ವಿಪತ್ತುಗಳು ಬಾರದಂತೆ ರಕ್ಷಿಸಬಲ್ಲನೆಂದು ಹೇಳಿದನು. ಇಬ್ಬರೂ ಒಂದಾಗಿ ಶ್ರೇಷ್ಠವಾದ ಅಹಿಂಸಾತ್ಮಕ ಅಸಹಕಾರ ವಿಧಾನವನ್ನನುಸರಿಸಿ ಪ್ರಜಾ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ವಿಶ್ವಭಾರತಿಯ ಆದರ್ಶವಾದ ಅಂತಾರಾಷ್ಟ್ರೀಯ ಸಹಕಾರದಿಂದಲೇ ಭಾರತ ಸ್ವಾತಂತ್ರ್ಯವು ಸಿದ್ಧಿಸಬಲ್ಲು ದೆಂದು ಇಬ್ಬರೂ ತಿಳಿದಿದ್ದರು.

## ಅಧ್ಯಾಯ ೧೧.

# ಶ್ರೀನಿಕೇತನ

ಶಿಲೇದಾದಲ್ಲಿದ್ದ ತನ್ನ ಕುಟುಂಬದ ಆಸ್ತಿಯ ಜವಾಬ್ದಾರಿಯನ್ನು ವಹಿಸಿದಂದಿನಿಂದ ಬಂಗಾಳದ ಹಳ್ಳಿಗಳ ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದನು. ಗ್ರಾಮಸ್ಥರು ಸ್ವತಂತ್ರರಾಗಿ ಸ್ವಾಯತ್ತತೆಯನ್ನು ಹೊಂದದ ವಿನಾ ದೇಶವು ನಿಜವಾದ ಶಾಂತಿಸೌಖ್ಯವನ್ನು ಹೊಂದದೆಂದು ನಂಬಿದನು. ಹಳ್ಳಿಗರು ತಮ್ಮ ಅಸಹಾಯಸ್ಥಿತಿಗೆ ಕಂಗೆಡದೆ ತಮ್ಮಲ್ಲಿಯೂ ಸಾಕಷ್ಟು ಚೈತನ್ಯವಿದೆ ಎಂಬುದನ್ನು ತಿಳಿದುಕೊಳ್ಳುವಂತೆ ಮಾಡಲು ಯತ್ನಿಸಿದನು. ಆದರೆ ಇದು ಕಷ್ಟಸಾಧ್ಯವೆಂದೂ ಹಳ್ಳಿಗರನ್ನು ಸ್ವತಂತ್ರರಾಗಿ ದುಡಿಯುವಂತೆ ಮಾಡಲು ಉತ್ಸಾಹ, ಸಹನೆ ಹಾಗೂ ಜಿಲ್ಲೆಯ ಸಂಪೂರ್ಣ ಪರಿಚಯ ಅಗತ್ಯ ವೆಂದೂ ಆತನು ತಿಳಿದಿದ್ದನು.

ಹಳ್ಳಿಯ ಪರಿಸ್ಥಿತಿಯನ್ನು ಪರಿಶೀಲಿಸಿ ಅಭಿವೃದ್ಧಿಗೊಳಿಸಲು ಪ್ರಯತ್ನಿಸು ವುದೂ ವಿಶ್ವವಿದ್ಯಾನಿಲಯದ ಪ್ರಮುಖ ಕಾರ್ಯಗಳಲ್ಲೊಂದು ಎಂಬುದು ರವೀಂದ್ರನ ಮತ. ಹಿಂದೂದೇಶವು ಹಳ್ಳಿಗಳ ತವರೂರು. ಉಚ್ಚ ವಿಶ್ವ ವಿದ್ಯಾಲಯವು ಹಳ್ಳಿಗಳೊಂದಿಗೆ ಸಮೀಪ ಸಂಬಂಧವನ್ನಿಟ್ಟುಕೊಳ್ಳಬೇಕೆಂದು ಬಗೆದು ರವೀಂದ್ರನು ಹಳ್ಳಿಗಳ ಸಮಸ್ಯೆಗಳನ್ನು ಪರಿಶೀಲಿಸುವ ಮತ್ತು ಪರಿಷ್ಕರಿ ಸುವ ಶಿಕ್ಷಣವಿಭಾಗವನ್ನು ವಿಶ್ವಭಾರತಿಯಲ್ಲಿ ತೆರೆದನು. ರವೀಂದ್ರನ ಹಿರಿಯಮಗ ರತೀಂದ್ರನಾಥನು ಅಮೆರಿಕಾದಲ್ಲಿ ಮೂರು ವರ್ಷಗಳ ಕಾಲ ಕೃಷಿಶಾಸ್ತ್ರವನ್ನು ಅಭ್ಯಾಸಮಾಡಿ ಮರಳಿ ಬಂದವನು ತಂದೆಯ ಕಾರ್ಯದಲ್ಲಿ

ಸಹಾಯಕನಾದನು. ಸರಿಯಾದ ವೈಜ್ಞಾನಿಕ ಶಿಕ್ಷಣ ಹೊಂದದ ವ್ಯಕ್ತಿಗಳನ್ನು ಗ್ರಾಮಪುನರ್ನಿರ್ಮಾಣ ಕಾರ್ಯದಲ್ಲಿ ವಿನಿಯೋಜಿಸುವುದು ಹಾನಿಕರವೆಂದು ರವೀಂದ್ರನು ತಿಳಿದಿದ್ದನು.

ಶಾಂತಿನಿಕೇತನದ ಸುತ್ತುಮುತ್ತ ಹಲವು ಹಳ್ಳಿಗಳಿವೆ. ಇಲ್ಲಿ 'ಸಂತಾಲ' ಜಾತಿಯವರು ವಾಸಿಸುವರು. ಇವರಿಗೂ ಬಂಗಾಳಿಗಳಿಗೂ ಆಚಾರವ್ಯವಹಾರಗಳಲ್ಲಿ ಬಹಳ ವ್ಯತ್ಯಾಸವಿದೆ. ಇವರು ಬಲಿಷ್ಠರು, ವಿಶ್ವಾಸಾರ್ಹರು, ಸ್ವತಂತ್ರಾಭಿಮಾನಿಗಳು, ಹಾಗೂ ಅತ್ಯುತ್ಸಾಹಿಗಳು. ದೇವೇಂದ್ರನಾಥನು ಮೊತ್ತಮೊದಲು ಶಾಂತಿನಿಕೇತನಕ್ಕೆ ಬಂದಿದ್ದಾಗ ಸಂತಾಲರ ಪ್ರದೇಶದಲ್ಲಿ ವಿಶೇಷ ದರೋಡೆ ನಡೆಯುತಿತ್ತು. ಸಂತಾಲರು ಧೈರ್ಯದಿಂದ ಹೋರಾಡುತಿದ್ದರು. ಇಂದಿಗೂ ಜಿಲ್ಲೆಯ ಕಠಿಣ ಕಾರ್ಯಗಳನ್ನು ಅವರೇ ನಿರ್ವಹಿಸುತ್ತಿರುವರು. ರವೀಂದ್ರನು ಅವರ ಸ್ವತಂತ್ರಜೀವನವನ್ನು ಮೆಚ್ಚಿ, ಅವರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದನು.

1913ರಲ್ಲಿ ರವೀಂದ್ರನು ಶಾಂತಿನಿಕೇತನದಿಂದ ಸುಮಾರು ಎರಡು ಮೈಲುಗಳ ದೂರದಲ್ಲಿರುವ ಸುರುಲ್ ಎಂಬ ಹಳ್ಳಿಯ ಬದಿಯಲ್ಲಿರುವ ಒಂದು ಭವ್ಯ ಮಂದಿರವನ್ನು ಕೊಂಡುಕೊಂಡನು. ಇದನ್ನು ಗ್ರಾಮಸೇವಾಕಾರ್ಯಕ್ರಮದ ಕೇಂದ್ರವನ್ನಾಗಿ ಮಾಡಿದನು. ರವೀಂದ್ರನ ಮಗನೊಂದಿಗೆ ಗ್ರಾಮಾಭಿವೃದ್ಧಿ ಕಾರ್ಯದಲ್ಲಿ ಸಹಕರಿಸಲು ಎಲ್. ಕೆ. ಎಲ್ಮ್‌ಹರ್ಸ್ಟ್ ಎಂಬ ಆಂಗ್ಲ ತರುಣನೂ ಬಂದು ಸೇರಿದನು. ಈತನು ಇಂಗ್ಲೆಂಡ್ ಅಮೆರಿಕಾದೇಶಗಳಲ್ಲಿ ಈ ಕ್ಷೇತ್ರದಲ್ಲಿ ದುಡಿದು ಅನುಭವ ಪಡೆದಿದ್ದನು. ರವೀಂದ್ರನು ಸುರುಲ್‌ನಲ್ಲಿ ಸ್ಥಾಪಿಸಿದ ಗ್ರಾಮಸೇವಾಮಂದಿರವೇ ಶ್ರೀನಿಕೇತನ. ರವೀಂದ್ರನ ಆಶೆ ಆದರ್ಶಗಳನ್ನು ಈ ಹೆಸರೇ ಸೂಚಿಸುವುದು. ಹಳ್ಳಿಯು ಸೌಂದರ್ಯ ಆರೋಗ್ಯ ಐಶ್ವರ್ಯಗಳ ತವರೂರಾಗಬೇಕೆಂಬುದೇ ರವೀಂದ್ರನ ಹೆಬ್ಬಯಕೆ.

ವಿಶ್ವಭಾರತಿಯ ಇತರ ಶಾಖೆಗಳಂತೆ ಶ್ರೀನಿಕೇತನವೂ ಸಣ್ಣರೂಪದಲ್ಲಿ ಪ್ರಾರಂಭವಾಗಿ ಕ್ರಮೇಣ ಅಭಿವೃದ್ಧಿಗೊಂಡು ಈಗಿನ ರೂಪವನ್ನು ತಾಳಿತು. ಆ ಹಳೆಯ ಮಂದಿರದಲ್ಲಿ ಇಂದು ಕಾರ್ಯಾಲಯವೂ, ಪುಸ್ತಕಭಂಡಾರವೂ ಇದೆ. ಇದರ ಒಂದು ಪಕ್ಕದಲ್ಲಿ ಶ್ರೀನಿಕೇತನದ ಅಧ್ಯಾಪಕ ವರ್ಗದ ಕುಟುಂಬ ವಸತಿಗಳಿವೆ. ಇನ್ನೊಂದು ಬದಿಯಲ್ಲಿ ವಿಶಾಲ ಹೊಲವಿದೆ. ಈ ಹೊಲದಲ್ಲಿ ನೂತನ ರೀತಿಯಲ್ಲಿ ಕೃಷಿಮಾಡಿ ಬೆಳೆದ ಪೈರನ್ನು ನೋಡಿ, ಕೃಷಿಕರು ಇದರಂತೆ ತಮ್ಮ ಹೊಲದಲ್ಲಿಯೂ ಉತ್ತಮ ಬೆಳೆಯನ್ನು ಬೆಳೆಸಿದರು. ಶ್ರೀನಿಕೇತನ ಭೂಮಿಯು ಫಲವತ್ತಾದುದಲ್ಲ. ಅಲ್ಲಿ ಕೆಲವೊಂದು ಬೆಳೆಯು ಬೆಳೆಯಲಾರದು. ಶ್ರೀನಿಕೇತನದ ಹೊಲದಲ್ಲಿ ಮಾಡಿದ ಪ್ರಯೋಗವನ್ನು ನೋಡಿದ ಮೇಲೆ ತಮ್ಮ

ಹೊಲಗಳಲ್ಲಿ ರೈತರು ಅದೇ ಪ್ರಯೋಗವನ್ನು ಮಾಡಿ ಉತ್ತಮ ನೆಲ್ಲು ಕಬ್ಬು ಮೊದಲಾದ ಬೆಳೆಯನ್ನು ಬೆಳೆಸಿದರು. ಈ ಪ್ರದೇಶದಲ್ಲಿ ಕಾಡುಗಳಿಲ್ಲದುದರಿಂದ ವರ್ಷಂಪ್ರತಿ ಮಳೆಗಾಲದಲ್ಲಿ ನೆಲದ ಫಲವತ್ತಾದ ಮಣ್ಣು ಕೊರೆದು ಹೋಗುತ್ತಿದೆ. ಈ ನಷ್ಟವನ್ನು ನಿವಾರಿಸಲು ಶ್ರೀನಿಕೇತನದವರು ಪ್ರಯತ್ನಿಸುತಿದ್ದಾರೆ. ಅಲ್ಲಿ ಉತ್ತಮ ಗೋಶಾಲೆಯೂ ಇದೆ; ಸುಂದರೋದ್ಯಾನವೂ ಇದೆ. ರೈತರು ತಂತಮ್ಮ ತೋಟಗಳಲ್ಲಿಯೂ ಹೊಲಗಳಲ್ಲಿಯೂ ಹಣ್ಣುಹಂಪಲುಗಳನ್ನು ಬೆಳೆಯುವಂತೆ ನಿಕೇತನದವರು ಪ್ರೋತ್ಸಾಹಿಸುವರು. ಉತ್ತಮ ಜಾತಿಯ ಹಣ್ಣಿನ ಗಿಡಗಳನ್ನು ಕಮ್ಮಿಬೆಲೆಗೆ ರೈತರಿಗೆ ಮಾರುವ ಏರ್ಪಾಡೂ ಇದೆ.

ಆರೋಗ್ಯ ಮತ್ತು ವೈದ್ಯಕೀಯ ವಿಭಾಗಗಳು ಶ್ರೀನಿಕೇತನದ ಪ್ರಮುಖ ಅಂಗ. ಹಳ್ಳಿಗಳಲ್ಲಿ ಆರೋಗ್ಯ ಸಹಕಾರ ಸಂಘಗಳ ಮೂಲಕ ಚಿಕಿತ್ಸೆ ನಡೆಯುವುದು. ಹಳ್ಳಿಗಳಲ್ಲಿರುವ ಪ್ರತಿಯೊಂದು ಕುಟುಂಬವೂ ನಿಶ್ಚಿತ ವಾರ್ಷಿಕ ಚಂದಾ ಹಣವನ್ನು ಕೊಡುವುದು. ಈ ಹಣದಿಂದ ವೈದ್ಯರ ಸಂಬಳವನ್ನು ಕೊಡಲಾಗುವುದು. ವೈದ್ಯನು ಗ್ರಾಮದಲ್ಲಿಯೇ ವಾಸಿಸುವನು. ವೈದ್ಯಾಲಯವೂ ಅಲ್ಲಿಯೇ ಇರುವುದು. ಸಂಘದ ಸದಸ್ಯರೆಲ್ಲರು ಉಚಿತವಾಗಿ ವೈದ್ಯನ ಸಹಾಯವನ್ನು ಹೊಂದಿ ಕಮ್ಮಿ ಬೆಲೆಗೆ ಔಷಧವನ್ನು ಪಡೆಯುವರು. ವೈದ್ಯನು ರೋಗಿಗಳ ಮನೆಗಳಿಗೆ ಹೋಗಬೇಕಾದಲ್ಲಿ ಅದಕ್ಕೆ ಪ್ರತ್ಯೇಕ ಸ್ವಲ್ಪ ಹಣವನ್ನು ಕೊಡಬೇಕಾಗುವುದು. ಈ ಹಣವನ್ನು ಸಂಘಕ್ಕೆ ಸೇರಿಸಲಾಗುವುದು. ಒಂದು ಗ್ರಾಮದಲ್ಲಿ ವೈದ್ಯನಿಗೆ ಸಾಕಷ್ಟು ಕುಟುಂಬಗಳಿಲ್ಲದೆ ಹೋದರೆ ಎರಡು ಮೂರು ಗ್ರಾಮಗಳಿಗೊಬ್ಬನಂತೆ ವೈದ್ಯನಿರುವನು. ಈತನು ರೋಗಿಗಳಿಗೆ ಚಿಕಿತ್ಸೆಯನ್ನು ಮಾಡುವುದು ಮಾತ್ರವಲ್ಲದೆ ಗ್ರಾಮಸ್ಥರಿಗೆ ಆರೋಗ್ಯದ ನಿಯಮಗಳನ್ನು ತಿಳಿಸಿ ರೋಗವನ್ನು ತಡೆಗಟ್ಟುವ ವಿಧಾನವನ್ನು ಕಲಿಸುವನು. ಸೊಳ್ಳೆಗಳನ್ನು ನಾಶಮಾಡುವ ಕ್ರಮವನ್ನು ತಿಳಿಸುವನು. ಈ ಗ್ರಾಮಸಹಕಾರಿ ಸಂಘಗಳಿಂದಾಗಿ ವೈದ್ಯಕೀಯ ವೆಚ್ಚವು ಮೂರು ಪಾಲಷ್ಟು ತಗ್ಗಿತು. ಮಲೇರಿಯಾ ಬಾಧೆಯೂ ಬಹಳ ಮಟ್ಟಿಗೆ ಕುಗ್ಗಿತು. ಅಮೆರಿಕದ ಡಾ. ಹೇರೀ ಟಿಂಬರ್ಸ್ ಎಂಬ ಮಲೇರಿಯಾ ನಿವಾರಣಾ ನಿಪುಣನು ಕುಟುಂಬಸಮೇತನಾಗಿ ಶ್ರೀನಿಕೇತನದಲ್ಲಿ ನೆಲಸಿ, ಜನರಿಗೆ ತನ್ನ ಅಮೂಲ್ಯ ಸೇವೆ ಸಲ್ಲಿಸಿದನು. ಈ ರೀತಿಯಲ್ಲಿ ಶ್ರೀನಿಕೇತನವೂ ಅಂತಾರಾಷ್ಟ್ರೀಯ ಸಂಸ್ಥೆಯಾಯಿತು.

ಒಂದು ಆರೋಗ್ಯ ಸಂಸ್ಥೆಯು ಫಲಕಾರಿಯಾಗಬೇಕಾದರೆ ಪ್ರತಿಯೊಬ್ಬನೂ ಸಹಕರಿಸಲೇ ಬೇಕು. ಯಾರಾದರೂ 'ನನ್ನ ಕುಟುಂಬದವರಿಗೆ ಈ ವರ್ಷ ಜಾಡ್ಯ ಬಂದಿಲ್ಲ. ನಾನೇಕೆ ಚಂದಾ ತೆರಬೇಕು? ಜಾಡ್ಯ ಬಂದಾಗ ಮಾತ್ರ

ಚಂದಾ ಕೊಟ್ಟೇನು' ಎಂದು ತನ್ನಷ್ಟಕ್ಕೇ ಹೇಳಿಕೊಂಡರೆ ಸಂಸ್ಥೆಯು ಕುಸಿದು ಬಿದ್ದಂತೆಯೇ! ಗ್ರಾಮಸ್ಥರ ಸಹಕಾರ ಸಹಾನುಭೂತಿಗಳಿಲ್ಲದೆ ಯಾವ ಸಂಸ್ಥೆಯೂ ಜಯಪ್ರದವಾಗದೆಂದು ರವೀಂದ್ರನು ಮೊದಲೇ ಮನಗಂಡಿದ್ದನು. ಗ್ರಾಮ ನಿವಾಸಿಗಳು ವಿದ್ಯಾವಂತರಾದಾಗ ಸಹಕಾರವು ತಾನಾಗಿ ಲಭಿಸುವುದು. ಇದಕ್ಕಾಗಿಯೇ ಶ್ರೀನಿಕೇತನದಲ್ಲಿ ಒಂದು ವಿದ್ಯಾಖಾತೆಯೂ ಇದೆ. ಈ ಖಾತೆಯು ಪ್ರತ್ಯೇಕ ಶಾಲೆಗಳನ್ನು ನಡೆಸುವುದಾಗಲಿ ಅಧ್ಯಾಪಕರಿಗೆ ವೇತನವನ್ನು ಕೊಡುವುದಾಗಲಿ ಇಲ್ಲ. ಆ ಕಾರ್ಯವನ್ನು ಸ್ಥಳೀಯ ಸರಕಾರವೇ ನಿರ್ವಹಿಸುವುದು. ಆದರೆ ಇದು ಹಳ್ಳಿಯ ಮಕ್ಕಳಿಗೆ ಎರಡು ವಿಧದಲ್ಲಿ ಸಹಾಯ ಮಾಡುವುದು.

ಮೊದಲನೆಯದು—ಹಳ್ಳಿಯ ಅಧ್ಯಾಪಕರಿಗೆ ಶ್ರೀನಿಕೇತನದಲ್ಲಿ ತರಬೇತಿ ಕೊಡುವುದು. ಶಿಕ್ಷಕರು ಮಕ್ಕಳ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಸಹಾನುಭೂತಿಪೂರ್ವಕ ಶಿಕ್ಷಣವನ್ನೀಯಬೇಕು. ಇದಕ್ಕಾಗಿ ಅಧ್ಯಾಪಕರ ಶಿಕ್ಷಾ ಕೇಂದ್ರವು ಇಲ್ಲಿ ಸ್ಥಾಪಿತವಾಯಿತು. ಗ್ರಾಮ ಸಮಸ್ಯೆ, ರೈತಜೀವನ ಮುಂತಾದುವುಗಳ ಕುರಿತು ಯೋಗ್ಯ ಸಲಹೆಯನ್ನಿಲ್ಲಿ ನೀಡಲಾಗುವುದು.

ಎರಡನೆಯದು—ವಿದ್ಯಾರ್ಥಿಗಳೊಂದಿಗೆ ಸಂಪರ್ಕ ಬೆಳೆಸುವುದು. ಇದಕ್ಕಾಗಿ ರವೀಂದ್ರನು 'ವ್ರತಿಬಾಲಕ' ಎಂಬ 'ಸ್ಕೌಟು'ದಳವನ್ನು ಸ್ಥಾಪಿಸಿ ದಳದ ಪ್ರತಿಜ್ಞೆಯನ್ನು ಸಾರುವ ಚೌಪದಿಯೊಂದನ್ನು ರಚಿಸಿದನು. ಯಾವಾಗಲೂ ಸಂಕಟದಲ್ಲಿ ಸಿಲುಕಿದವರಿಗೆ ಸಹಾಯಮಾಡುವೆವು ಎಂಬುದೇ ಈ ಪದ್ಯದ ಸಾರಾಂಶ. ಈ ಹಾಡನ್ನು ಹಾಡುತ್ತ ಮಕ್ಕಳು ಕೆಲಸಮಾಡುವರು. ಹಳ್ಳಿಯ ಶಾಲೆಯಲ್ಲಿ ಕಲಿಸದ ಎಷ್ಟೋ ವಿಷಯಗಳನ್ನು ಇವರು ಈ ಸಂಘದ ಸಭೆಗಳಿಂದ ಕಲಿತರು. ಇವರು ಯಾವಾಗಲೂ ಶುಚಿಯಾಗಿ, ಆರೋಗ್ಯವಂತರಾಗಿ ಇರುವುದಕ್ಕೂ ಗ್ರಾಮದಲ್ಲಿ ಅಕಸ್ಮಾತ್ ಬೆಂಕಿ ಹತ್ತಿಕೊಂಡರೆ ಕೂಡಲೇ ಅಲ್ಲಿಗೆ ಧಾವಿಸಿ ಅದನ್ನು ನಂದಿಸುವುದಕ್ಕೂ ಕಲಿಯುವರು. ಆ ಮಕ್ಕಳೆಂದೂ ಅಲಸಿಗಳಾಗಿರಲಿಲ್ಲ. ತಮ್ಮ ಮನೆಯ ತೋಟಗಳಲ್ಲಿ ಆರೋಗ್ಯದಾಯಕವಾದ ತರಕಾರಿಗಳನ್ನು ಬೆಳೆಸುವರು. ಔಷಧಿಗೆ ಸಂಬಂಧಿಸಿದ ಗಿಡಮೂಲಿಕೆಗಳನ್ನು ಗುರುತಿಸಿ ಅವು ಎಲ್ಲಿ ದೊರಕುವುವೆಂಬುದನ್ನು ತಿಳಿದುಕೊಳ್ಳುವರು. ಗ್ರಾಮದಲ್ಲಿ ಯಾರಿಗಾದರೂ ಅಸ್ವಸ್ಥವಾದರೆ ಕೂಡಲೆ ವೈದ್ಯನಲ್ಲಿಗೆ ಹೋಗಿ ಔಷಧವನ್ನು ತಂದುಕೊಡುವರು. ಕಾಡುಗಳನ್ನೂ ಹೊಲಸುನಾರುತ್ತಿರುವ ಹಳ್ಳಿಯ ಕೆರೆಗಳನ್ನೂ ಶುಚಿಗೊಳಿಸಿ ಸೊಳ್ಳೆಗಳ ಕಾಟವನ್ನು ನಿವಾರಿಸುವರು. ಬೀದಿಗಳನ್ನು



ಶಾಂತಿನಿಕೇತನದಲ್ಲೊಂದು ಉತ್ಸವ

ಶುಚಿಯಾಗಿರಿಸುವರು. ತಮ್ಮ ಮನೆಗಳಲ್ಲಿ ಮಾತ್ರವಲ್ಲದೆ ಸಂಘದ ಸ್ಥಳದಲ್ಲಿಯೂ ಸುಂದರ ತೋಟಗಳನ್ನು ಮಾಡುವರು. ತೋಟದಲ್ಲಿ ಬೆಳೆದ ತರಕಾರಿಗಳನ್ನೂ ಹಣ್ಣು ಹಂಪಲುಗಳನ್ನೂ ಮಾರಿ ಬಂದ ಹಣದಿಂದ ಪಠ್ಯಪುಸ್ತಕಗಳನ್ನು ಕೊಂಡು ಕೊಳ್ಳುವರು. ಅವರಿಗೆ ವಿಧವಿಧವಾದ ಆಟಪಾಠಗಳು, ನಾಟಕಗಳು, ಹಾಡು ಗಳು, ಕತೆಗಳು ಇರುವುವು. ಆಗಾಗ ಪ್ರವಾಸ ಹೋಗುವರು. ಈ ಪ್ರಕಾರ ಆಟಪಾಠಗಳನ್ನು ಒಂದಾಗಿ ಕಲಿಯುವರು.

'ವ್ರತಿಬಾಲಕ' ಸಂಘವು ಹಳ್ಳಿಗಳಲ್ಲಿ ಪರಸ್ಪರ ಸಹಕಾರ ಸಹಾಯಗಳನ್ನು ಮಾಡಲು ಕಲಿಸುವುದು. ಇಂಗ್ಲಂಡಿನಲ್ಲಿ 'ರಾಬರ್ಟ್ ಬಾಡೆನ್ ಪವೆಲ್' ಎಂಬವನು ಮೊತ್ತಮೊದಲು ಸ್ಕೌಟ್ ಸಂಘವನ್ನು ಸ್ಥಾಪಿಸಿದನು. ರವೀಂದ್ರನು ಈ ಪದ್ಧತಿಯನ್ನು ಚೆನ್ನಾಗಿ ಪರಿಶೀಲಿಸಿ ಹಿಂದೂ ಗ್ರಾಮಜೀವನಕ್ಕೆ ಹೊಂದಿಕೆ ಯಾಗುವಂತೆ ಅಳವಡಿಸಿಕೊಂಡನು.

ಹಳ್ಳಿಗಳಲ್ಲಿ ಪ್ರಾಥಮಿಕ ಪಾಠಶಾಲೆಗಳು ಮಾತ್ರವೇ ಇದ್ದುವು. ಹಳ್ಳಿಯ ಹುಡುಗರು ತಮ್ಮ ಗ್ರಾಮಸ್ಥರಿಗೆ ಮಾರ್ಗದರ್ಶಕರಾಗುವಂತೆ ಅವರನ್ನು ವಿದ್ಯಾ ವಂತರನ್ನಾಗಿಯೂ ವಿವೇಕಿಗಳನ್ನಾಗಿಯೂ ಮಾಡುವುದು ಅಗತ್ಯವೆಂದು ರವೀಂದ್ರನು ಭಾವಿಸಿದನು. ಎಂಟು ಯಾ ಒಂಬತ್ತು ವರ್ಷ ಪ್ರಾಯದ ಮಕ್ಕಳು ಹದಿನೈದು ಹದಿನಾರು ವರ್ಷದವರಾಗುವ ತನಕ ಶ್ರೀನಿಕೇತನದಲ್ಲಿ ನೆಲಸಿ, ಬಂಗಾಳೀ ಸಾಹಿತ್ಯ, ಚರಿತ್ರೆ, ಜೀವನ ಚರಿತ್ರೆ, ವಿಜ್ಞಾನಶಾಸ್ತ್ರ, ಗಣಿತಶಾಸ್ತ್ರ ಮುಂತಾದುವುಗಳನ್ನು ಅಭ್ಯಾಸಮಾಡುವರು. ಇದರಿಂದ ಅವರ ಜ್ಞಾನವು ಅಭಿ ವೃದ್ಧಿಹೊಂದುವುದು. ಜತೆಯಲ್ಲಿ ತೋಟಗಾರಿಕೆ, ಬಟ್ಟೆನೇಯುವುದು ಮೊದಲಾದು ವನ್ನು ಕಲಿಯುವರು. ಆದರೆ ಹೆಚ್ಚಾಗಿ ಅವರು ಯಾವ ಪರೀಕ್ಷೆಗೂ ಕುಳಿತು ಕೊಳ್ಳುವುದಿಲ್ಲ. ಇಷ್ಟಾದ ಮೇಲೆ ಇನ್ನೂ ಹೆಚ್ಚಿನ ವಿದ್ಯಾಭ್ಯಾಸವನ್ನು ಮಾಡ ಬಯಸುವವರಿಗೆ ತಂತಮ್ಮ ಮನೆಗಳಲ್ಲಿ ಪ್ರತ್ಯೇಕ ಏರ್ಪಾಡನ್ನು ಮಾಡಿದನು. ಇದರಿಂದ ತರುಣ ತರುಣಿಯರಿಗೆ ಮನೆಯಲ್ಲೇ ಇದ್ದು ಪ್ರಪಂಚ ಜ್ಞಾನವನ್ನು ಸಂಪಾದಿಸಿಕೊಳ್ಳಲು ಅವಕಾಶ ಸಿಕ್ಕಿತು. ಈ ಪ್ರಕಾರ ಮನೆಯಲ್ಲೇ ಕಲಿತವರಿಗೆ ಅವರವರ ಯೋಗ್ಯತಾನುಸಾರ ಪ್ರಾಥಮಿಕ, ಮಾಧ್ಯಮಿಕ ಹಾಗೂ ಉಚ್ಚ ಯೋಗ್ಯತಾ ಪತ್ರಗಳನ್ನೀಯುವರು. ಈ ವಿದ್ಯಾಭ್ಯಾಸಕ್ಕೆ ಬೇಕಾದ ಪುಸ್ತಕ ಗಳನ್ನು ರವೀಂದ್ರನೇ ಉತ್ಸಾಹವಹಿಸಿ ಬರೆಯುತಿದ್ದನು.

ಶ್ರೀನಿಕೇತನವು ಸರಳ ಬಂಗಾಳಿಯಲ್ಲಿ ಚಿಕ್ಕ ಪತ್ರಿಕೆಯೊಂದನ್ನು ಹೊರಡಿ ಸಿತು. ಇದರಲ್ಲಿ ಮುಖ್ಯವಾಗಿ ದೈನಂದಿನ ವಾರ್ತೆಗಳು, ಗ್ರಾಮವಾಸಿಗಳಿ ಗೊಪ್ಪುವ ಲಲಿತ ಬರೆಹಗಳು ಇದ್ದುವು. ಇದು ವಯಸ್ಕರ ಶಿಕ್ಷಣದಲ್ಲಿ ತುಂಬಾ

ಪ್ರಯೋಜನಕಾರಿಯಾಯಿತು. ಕೇವಲ ಓದುಬರೆಹಗಳನ್ನಷ್ಟೇ ಕಲಿತರೆ ವಯಸ್ಕರ ಶಿಕ್ಷಣ ಪೂರ್ತಿಯಾಗುವುದಿಲ್ಲ. ಅವರ ಭಾವನೆ ವಿಶಾಲವಾಗಬೇಕು, ಆಲೋಚನಾಶಕ್ತಿ ವೃದ್ಧಿಹೊಂದಬೇಕು, ನಿತ್ಯಜೀವನವು ಆನಂದದಾಯಕವಾಗಬೇಕು ಎಂಬುದು ರವೀಂದ್ರನ ಅಭಿಪ್ರಾಯ.

ಶಿಲ್ಪಭವನವೂ ಶ್ರೀನಿಕೇತನದ ಮುಖ್ಯ ಅಂಗಗಳಲ್ಲಿ ಒಂದು. ಇಲ್ಲಿ ಮಕ್ಕಳಿಗೆ ಜೀವನಾಧಾರವಾದ ವೃತ್ತಿ ಶಿಕ್ಷಣವು ಕೊಡಲಾಗುವುದು. ಬಡಗಿಯ ಶಾಖೆಯಲ್ಲಿ ಮನೆಗೆ ಬೇಕಾಗುವ ಕಿಟಕಿ, ಬಾಗಿಲು, ಕುರ್ಚಿ ಮುಂತಾದ ಸಾಮಾನುಗಳನ್ನು ಸಿದ್ಧಪಡಿಸುವರು. ನೇಯ್ಗೆಯ ಶಾಖೆಯಲ್ಲಿ ಸೀರೆ, ಜಮಖಾನೆ, ಬಟ್ಟೆ ಮೊದಲಾದುವನ್ನು ನೇಯುವರು. ಪುಸ್ತಕಗಳನ್ನು ಕಟ್ಟುವ, ಚರ್ಮದಿಂದ ಚಪ್ಪಲಿ, ಚೀಲ ಮುಂತಾದುವನ್ನು ಮಾಡುವ, ಮಣ್ಣಿನಿಂದ ಮಡಕೆ, ಕುಡಿಕೆ, ಹೂಜೆ, ತಟ್ಟೆ, ಗ್ಲಾಸುಗಳನ್ನು ಮಾಡುವ ವಿಭಾಗಗಳೂ ಇವೆ. ಶಾಂತಿನಿಕೇತನದ ಕಲಾನಿಪುಣರ ಸಲಹಾನುಸಾರವಾಗಿ ಬಣ್ಣಬಣ್ಣದ ಸುಂದರ ಬೊಂಬೆಗಳನ್ನು ಮಾಡುವರು.

ಶಿಲ್ಪಭವನದಲ್ಲಿ ತಯಾರಿಸಿದ ಈ ಸಾಧನಗಳನ್ನು ಮಾರಲು ಕಲ್ಕತ್ತಾದಲ್ಲಿ ಪ್ರತ್ಯೇಕ ಅಂಗಡಿಯೊಂದಿದೆ. ಮಾರುವುದಕ್ಕೆ ಯೋಗ್ಯವಾದ ಸಾಧನಗಳನ್ನು ತಯಾರಿಸುವವರಿಗೆ ಸಂಬಳವನ್ನು ಕೊಡುವರು. ಮಳೆ ಬಾರದೆ ಹಳ್ಳಿಗಳಲ್ಲಿ ಕ್ಷಾಮವುಂಟಾದಾಗ ಶಾಂತಿನಿಕೇತನದ ಕೆಲಸಗಾರರು ಹಳ್ಳಿಗರಿಗೆ ತುಂಬ ಸಹಾಯಮಾಡುವರು. ಗ್ರಾಮಜೀವಿಗಳು ಇವರನ್ನು ತುಂಬ ವಿಶ್ವಾಸದಿಂದ ಕಾಣುವರು. ವಿದ್ಯಾರ್ಥಿಗಳು ಸರಕಾರೋದ್ಯೋಗಿಗಳೊಂದಿಗೆ ಸೇರಿ ಕ್ಷಾಮ ನಿವಾರಣೆಗಾಗಿ ದುಡಿಯುವರು.

ಶ್ರೀನಿಕೇತನದ ಸುತ್ತಲಿನ ಹಳ್ಳಿಗಳನ್ನು ಸಂಪತ್ಸಮೃದ್ಧವನ್ನಾಗಿಯೂ ಸುಖಸಂತೋಷಗಳ ಆಗರವನ್ನಾಗಿಯೂ ಮಾಡಲು ರವೀಂದ್ರನು ಪಾಡುಪಟ್ಟನು. ತಾನು ಆರಂಭಿಸಿದ ಗ್ರಾಮಸೇವಾ ಕಾರ್ಯಕ್ರಮವು ದೇಶದಲ್ಲೆಲ್ಲಾ ವ್ಯಾಪಿಸಬೇಕೆಂದು ಆತನು ಕೋರಲಿಲ್ಲ. ಒಂದು ಹಳ್ಳಿಯಲ್ಲಿ ಒಬ್ಬನಾದರೂ ನಿಜವಾದ ಸುಖ ಸಂತೋಷ ಸಹಕಾರಗಳನ್ನುಂಟುಮಾಡಿದನೆಂದರೆ ತಾನು ಧನ್ಯನೆಂದು ರವೀಂದ್ರನು ಹೇಳುತಿದ್ದನು. ಅದೇ ನಿಜವಾದ ಸ್ವರಾಜ್ಯ. ಹಿಂದೂ ದೇಶದ ಅಸಂಖ್ಯಾತ ಗ್ರಾಮಗಳೆಲ್ಲವೂ ಸ್ವಯಂಪೂರ್ಣಗಳಾಗಿ ಸುಖದಿಂದ ಬಾಳಿದಾಗಲೇ ದೇಶವು ನಿಜವಾಗಿ ಸ್ವತಂತ್ರವಾಗುವುದು. ಗ್ರಾಮಗಳ ಏಳಿಗೆಯಿಂದಲೇ ದೇಶದ ಏಳಿಗೆ. ಗ್ರಾಮಗಳ ಸುಖವೇ ಭಾರತದ ಕ್ಷೇಮ. ಭಾರತದ

ಪ್ರತಿಯೊಂದು ಹಳ್ಳಿಯೂ ಶ್ರೀನಿಕೇತನದಂತೆ ಆನಂದ ಸೌಂದರ್ಯಗಳಿಂದ ಶೋಭಿಸಬೇಕೆಂಬುದೇ ರವೀಂದ್ರನ ಮಹದಾಶೆ.

## ಅಧ್ಯಾಯ ೧೨.

# ಕತೆಗಾರ ರವೀಂದ್ರ

**1914–1919**ರ ಯುದ್ಧಾನಂತರದ ನಾಲ್ಕೈದು ವರ್ಷಗಳಲ್ಲಿ ರವೀಂದ್ರನು ಸಾಧಿಸಿದ ಮಹತ್ಕಾರ್ಯಗಳೆಂದರೆ ಉತ್ತಮ ಆದರ್ಶವುಳ್ಳ ಲೋಕವಿಖ್ಯಾತವಾದ ಅಂತಾರಾಷ್ಟ್ರೀಯ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದುದು, ಭಾರತದ ಕ್ಲಿಷ್ಟ ಪರಿಸ್ಥಿತಿಯಲ್ಲಿ ಸ್ವಾತಂತ್ರ್ಯ ಚಳವಳದಲ್ಲಿ ಹುರುಪಿನಿಂದ ಭಾಗವಹಿಸಿದುದು, ಹಾಗೂ ಗ್ರಾಮಾಭಿವೃದ್ಧಿ ಕಾರ್ಯದಲ್ಲಿ ಶ್ರದ್ಧೋತ್ಸಾಹದಿಂದ ದುಡಿದುದು. ಸಾಮಾನ್ಯ ವ್ಯಕ್ತಿಯಾಗುತಿದ್ದರೆ ಇವುಗಳಲ್ಲೊಂದನ್ನು ನಿರ್ವಹಿಸುವಾಗಲೇ ಕಂಗಾಲಾಗುತಿದ್ದನು. ಆದರೆ ಇವುಗಳಿಂದಾಗಿ, ಅರುವತ್ತು ವರ್ಷಗಳು ದಾಟಿದ್ದರೂ ರವೀಂದ್ರರ ಶಕ್ತ್ಯುತ್ಸಾಹಗಳು ಎಳ್ಳಷ್ಟೂ ಕುಂದಲಿಲ್ಲ. ಈ ದಿನಗಳಲ್ಲಿ ಆತನು ಏನನ್ನೋ ಬರೆಯುತ್ತಲೂ ಅನುವಾದ ಮಾಡುತ್ತಲೂ ತನ್ನ ವಿವಿಧ ಗ್ರಂಥಗಳನ್ನು ಪ್ರಕಟಿಸುವುದಕ್ಕಾಗಿ ಪರಿಶೀಲನೆಮಾಡುತ್ತಲೂ ಇದ್ದನು. ಇಂಗ್ಲೆಂಡಿನಲ್ಲಿಯೂ ಅಮೆರಿಕಾದಲ್ಲಿಯೂ ಆವನ ಕವನಗಳು, ಸಣ್ಣ ಕತೆಗಳು, ಕಾದಂಬರಿಗಳು, ಉಪನ್ಯಾಸಗಳು ಭಾಷಾಂತರಗೊಂಡು ಪ್ರಚಾರವಾದುವು. ಯುರೋಪಿನ ಇತರ ಭಾಷೆಗಳಿಗೂ ಅನುವಾದಿಸಲ್ಪಟ್ಟುವು. 1923ರಲ್ಲಿ ಆತನು 'ವಿಶ್ವಭಾರತಿ ತ್ರೈಮಾಸಿಕ' ಪತ್ರಿಕೆಯನ್ನು ಪ್ರಾರಂಭಿಸಿದನು. ಇದರಲ್ಲಿ ಭಾರತದ ಹಾಗೂ ದೇಶದೇಶಗಳ ನಾಗರಿಕತೆ, ಸಾಹಿತ್ಯ ಲಲಿತಕಲೆಗಳಿಗೆ ಸಂಬಂಧಿಸಿದ ವಿವಿಧ ಲೇಖನಗಳೂ ಚಿತ್ರಗಳೂ ಪ್ರಕಟವಾಗುತಿದ್ದುವು. ಕೆಲವು ಕಾಲ ರವೀಂದ್ರನೇ ಇದರ ಸಂಪಾದಕನಾಗಿದ್ದನು. ತನ್ನ ಮರಣ ಪರ್ಯಂತ ಈ ಪತ್ರಿಕೆಯ ಪ್ರತಿ ಸಂಚಿಕೆಗೂ ಲೇಖನವನ್ನಾಗಲಿ ಕವನವನ್ನಾಗಲಿ ತಪ್ಪದೆ ಬರೆಯುತಿದ್ದನು. ಆತನು ಯುರೋಪಿನಲ್ಲಿಯೂ ಇತರೆಡೆಗಳಲ್ಲಿಯೂ ಸಂಚಾರ ಮಾಡುತಿದ್ದಾಗ ಶಾಂತಿನಿಕೇತನದಲ್ಲಿದ್ದ ತನ್ನ ಸ್ನೇಹಿತ ಅಂಡ್ರೂಸನಿಗೆ ಸುದೀರ್ಘ ಪತ್ರಗಳನ್ನು ಬರೆದು ಆತನ ಮೂಲಕ ನಿಕೇತನದ ವಿಶೇಷಗಳನ್ನು ತಿಳಿಯುತಿದ್ದನು. ಆ ಮೇಲೆ ಈ ಪತ್ರಗಳನ್ನು ಒಟ್ಟಾಗಿ ಪ್ರಕಟಿಸಲಾಯಿತು. ಇದರಲ್ಲಿ ಬಹಳ ಲೋಕಾನುಭವವೂ ಸಮಕಾಲೀನ ಸಮಸ್ಯೆಗಳೂ ಯುರೋಪ್ ಮತ್ತು

ಭಾರತದ ಕುರಿತು ಚತುರ ಟೀಕೆಗಳೂ, ಜೊತೆಯಲ್ಲಿ ನಗೆಬರಹಗಳೂ ತುಂಬಿವೆ. ರವೀಂದ್ರನು ವಿನೋದಪ್ರಿಯನೂ ಹೌದು.

ರವೀಂದ್ರನಿಗೆ ಅತಿಪ್ರಿಯವಾದ ಒಂದು ಹಳೆಯ ಕತೆಯಿದೆ.—ಒಮ್ಮೆ ಒಂದು ಆಡಿನ ಮರಿ ಅಳುತ್ತಾ ಬ್ರಹ್ಮದೇವನಲ್ಲಿಗೆ ಹೋಗಿ 'ಬ್ರಹ್ಮದೇವನೇ! ಎಲ್ಲಾ ಜೀವಿಗಳೂ ನನ್ನನ್ನೇ ತಿನ್ನಲು ಏಕೆ ಹಾತೊರೆಯುತ್ತಿವೆ?' ಎಂದು ಪ್ರಶ್ನಿಸಿತಂತೆ. ಆಗ ಬ್ರಹ್ಮನು ಏನು ಹೇಳಲೂ ತೋಚದೆ 'ಅಯ್ಯೋ ನಾನೇನು ಮಾಡಲಿ ಕಂದ? ನಿನ್ನನ್ನು ನೋಡಿದೊಡನೆ ತಿನ್ನಬೇಕೆಂದು ನನಗೇ ಬುದ್ಧಿ ಹುಟ್ಟುತ್ತಿದೆ' ಎಂದನಂತೆ! ಫ್ರೆಂಚ್ ವಿದ್ವಾಂಸನೊಬ್ಬನು ರವೀಂದ್ರನ ಕಾದಂಬರಿಗಳಲ್ಲೊಂದಕ್ಕೆ ಬರೆದ ಮುನ್ನುಡಿಯಲ್ಲಿ ಈ ಕತೆಯನ್ನು ಸೇರಿಸಿರುವನು. ಮುನ್ನುಡಿ ಬರೆಯುತ್ತಾ 'ಫ್ರಾನ್ಸಿನಲ್ಲಿ ಬಹಳ ಮಂದಿ ರವೀಂದ್ರನ ಧಾರ್ಮಿಕ ಗೀತಗಳನ್ನು ಚಾರಿತ್ರಿಕ ಹಾಗೂ ವೇದಾಂತ ಸಂಬಂಧವಾದ ಲೇಖನಗಳನ್ನು ಓದಿದ ಮಾತ್ರದಿಂದಲೇ ಆತನು ಸಾಮಾನ್ಯ ಮಾನವನಲ್ಲ, ದೇವದೂತನು ಎಂದು ಭಾವಿಸುವರು. ಸಾಮಾನ್ಯ ಜನರ ಜೀವನಕ್ಕೂ ಆತನ ಜೀವನಕ್ಕೂ ಯಾವ ಸಂಬಂಧವೂ ಇಲ್ಲವೆಂದು ತಿಳಿಯುವರು. ಆದರೆ ಹಿಂದೂ ದೇಶದಲ್ಲಿ ಮಹಾ ಸಾಧುಗಳು, ವೈಜ್ಞಾನಿಕರು, ಕವಿಗಳು, ಎಲ್ಲರೂ ವಿನೋದಪ್ರಿಯರೇ! ಅಂತೆಯೇ ರವೀಂದ್ರನೂ ರಸಿಕನೇ. ಎಲ್ಲರನ್ನೂ ನಕ್ಕುನಗಿಸಬಲ್ಲನು' ಎಂದಿರುವನು. ರವೀಂದ್ರನ ಕಾದಂಬರಿಗಳನ್ನೂ ಸಣ್ಣ ಕತೆಗಳನ್ನೂ ಓದಿದಾಗ ಸಾಮಾನ್ಯ ಜನಜೀವನದಲ್ಲಿ ಆತನಿಗಿದ್ದ ಪರಿಚಯ, ಹಾಸ್ಯಾನುಕಂಪಾದಿಗಳು ವ್ಯಕ್ತವಾಗುವುವು.

ತನ್ನ ಬಾಲ್ಯದಲ್ಲಿ ನಡೆದ ಎಷ್ಟೋ ಸಂಗತಿಗಳನ್ನು ಆಧಾರವಾಗಿಟ್ಟುಕೊಂಡು ಸುಂದರವಾದ ಸಣ್ಣ ಕತೆಗಳನ್ನು ರವೀಂದ್ರನು ಬರೆದಿರುವನು. 'ಅಸ್ಥಿಪಂಜರ'ವೆಂಬುದು ಅವುಗಳಲ್ಲೊಂದು. ಅವನು ಚಿಕ್ಕವನಾಗಿದ್ದಾಗ ಓದುವ ಕೋಣೆಯಲ್ಲೊಂದು ಅಸ್ಥಿಪಂಜರವು ನೇತಾಡುತಿತ್ತು. ಮಕ್ಕಳೆಲ್ಲರು ಅದನ್ನು ನೋಡಿ ಬೇರೆಬೇರೆ ಎಲುಬುಗಳ ಹೆಸರುಗಳನ್ನು ತಿಳಿದುಕೊಳ್ಳುತ್ತಿದ್ದರು. ಗಾಳಿ ಬಂದಾಗ ಅದರ ಎಲುಬುಗಳು ಅಲ್ಲಾಡಿ ಕಟಕಟ ಸದ್ದಾಗುತಿತ್ತು. ಆದರೆ ನಿತ್ಯಾಭ್ಯಾಸದಿಂದ ಮಕ್ಕಳು ಇದಕ್ಕೆ ಹೆದರುತ್ತಿರಲಿಲ್ಲ. ರವೀಂದ್ರನು ಬರೆದ ಕತೆಯಲ್ಲಿ ಅಸ್ಥಿಪಂಜರವು ಒಂದು ದಿನ ಕನಸಿನಲ್ಲಿ ಕಾಣಿಸಿಕೊಂಡು, ಒಂದು ಕಾಲದಲ್ಲಿ ತಾನು ಓರ್ವ ಸುಂದರ ಯುವತಿಯಾಗಿದ್ದೆನೆಂದು ತನ್ನ ಕತೆಯನ್ನು ಹೇಳುವುದು.

'ನನ್ನ ಬಾಲ್ಯದ ದಿನಗಳು' ಎಂಬ ಬರೆಹದಲ್ಲಿ ತಾನು ಚಿಕ್ಕವನಾಗಿದ್ದಾಗ

ಪಂಜಾಬಿನಿಂದಲೂ ಇತರ ದೂರದ ಭಾಗಗಳಿಂದಲೂ ತಂದೆಯೊಂದಿಗೆ ಬಂದ ಸೇವಕರು ತನ್ನನ್ನು ಎಷ್ಟೊಂದು ಪ್ರೀತಿಸುತ್ತಿದ್ದರು ಎಂಬುದನ್ನು ವರ್ಣಿಸಿರುವನು. ಬೀದಿಯಲ್ಲಿ ನಾನಾ ವಸ್ತುಗಳನ್ನು ಮಾರಲು ಬರುತ್ತಿದ್ದ ಉನ್ನತ ಪ್ರದೇಶದ ಜನರೂ ಬಾಲಕನಾದ ರವೀಂದ್ರನನ್ನು ಆಕರ್ಷಿಸಿದರು. 'ಕಾಬೂಲಿವಾಲಾ' ಕತೆಯು ಇದಕ್ಕೆ ಯೋಗ್ಯ ಉದಾಹರಣೆ. ತಾನು ಅಣ್ಣನೊಂದಿಗೆ ಅಹಮ್ಮದಾಬಾದಿನ ವಿಶಾಲ ಭವನದಲ್ಲಿದ್ದಾಗ 'ಹಸಿದ ಕಲ್ಲುಗಳು' ಎಂಬ ಕತೆಯನ್ನು ಬರೆದನೆಂದು ಈ ಮೊದಲೇ ಕೇಳಿರುವೆವು. ಒಬ್ಬ ಸರಕಾರಿ ನೌಕರನು ಯಾವುದೋ ಕೆಲಸದ ನಿಮಿತ್ತ ಒಂದು ಪ್ರಾಚೀನ ಭವನದಲ್ಲಿ ವಾಸಿಸುವನು. ಅಲ್ಲಿನ ಪೂರ್ವಕಾಲದ ವೈಭವವು ಅವನ ಕಲ್ಪನೆಯನ್ನು ಪೂರ್ಣ ಆವರಿಸುವುದು. ಹಗಲಿರುಳು ತಪ್ಪದೆ ತನ್ನ ಊಹಾಪ್ರಪಂಚದಲ್ಲಿ ಆ ಭವನದ ಕಲ್ಲುಗಳು ಹೇಳುವ ಕತೆಗಳನ್ನು ಕೇಳುವನು. ಮರಳಿ ಬಹಳ ಪ್ರಯಾಸದಿಂದ ನೈಜ ಜಗತ್ತಿಗೆ ಪ್ರವೇಶಿಸುವನು.

ರವೀಂದ್ರನ ಸಣ್ಣ ಕತೆಗಳಲ್ಲಿನ ವಸ್ತು, ಪಾತ್ರ, ಸನ್ನಿವೇಶಗಳು ಸರಳ ಸುಂದರವಾದುವು, ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ ವಾಸಿಸುವ ಜನಸಾಮಾನ್ಯ ಸ್ತ್ರೀಪುರುಷರೇ ಪಾತ್ರಗಳು; ಅವರ ದಿನಚರ್ಯೆಗಳನ್ನು, ಭಾವಗಳನ್ನು ಕಷ್ಟಸುಖಗಳನ್ನು ಕತೆಗಳಲ್ಲಿ ಬಣ್ಣಿಸುವನು. ಆದರೆ ಅವನ ಲೇಖನಿಯ ಪ್ರಭಾವದ ಮೂಲಕ ಸಾಮಾನ್ಯ ಘಟನೆಗಳೇ ನಮ್ಮ ಹೃದಯದಲ್ಲಿ ವಿದ್ಯುತ್ ಸಂಚಾರವನ್ನುಂಟುಮಾಡುವುವು. 'ಸುಭಾ' ಎಂಬ ಕತೆಯಲ್ಲಿ ಹಳ್ಳಿಯ ಮೂಕ ಬಾಲಿಕೆಯೊಬ್ಬಳ ಹೃದಯವೇದನೆಯನ್ನು ಚಿತ್ರಿಸಿರುವನು. 'ಸುಭಾ' ತನ್ನ ತಂದೆ ತಾಯಿಗಳ ಮೂರನೆಯ ಮಗಳು. ಆಕೆ ಮೂಕಿಯಾದುದರಿಂದ ಆಕೆಯಲ್ಲಿ ಯಾವ ವಿಧವಾದ ಭಾವಗಳೂ ಇರಲಾರವೆಂದು ಎಲ್ಲರೂ ಭಾವಿಸುವರು. ಯಾರಿಗೂ ತನ್ನಲ್ಲಿ ಅಕ್ಕರೆಯಿಲ್ಲದುದನ್ನು ತಿಳಿದು ಆ ಮೂಕ ಬಾಲಿಕೆ ತನ್ನಂತೆ ಬಾಯಿಬಾರದ ಎರಡು ದನಗಳಲ್ಲಿಯೂ, ಆ ಊರಿನ ಸೋಮಾರಿ ಹುಡುಗನಾದ ಪ್ರತಾಪನಲ್ಲಿಯೂ, ಪ್ರಶಾಂತವಾಗಿ ಹರಿಯುತ್ತಿರುವ ನದಿಯುಲ್ಲಿಯೂ, ಮೌನಳಾದ ಭೂಮಾತೆಯಲ್ಲಿಯೂ ಸ್ನೇಹವನ್ನು ಮಾಡುವಳು. ಮಾನವರ ಸಹವಾಸವನ್ನೇ ಬಿಟ್ಟುಬಿಡುವಳು. ಆದರೆ ಕುಲಾಚಾರದಂತೆ ಆಕೆಗೆ ವಿವಾಹವಾಗುವುದು ತಪ್ಪಲಿಲ್ಲ. ಮಾತಾಪಿತೃಗಳು ಆಕೆಯನ್ನು ಕಲ್ಕತ್ತಕ್ಕೆ ಕರಕೊಂಡು ಹೋಗಿ ವರನಿಗೆ ತೋರಿಸುವರು. ವರನು ವಧುವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ 'ಪರವಾಯಿಲ್ಲ' ಎನ್ನುವನು. ಅದೃಷ್ಟವಶಾತ್ ಮದುವೆ ಮುಗಿಯುವವರೆಗೆ ವಧು ಬಾಯಿತೆರೆಯಲಿಲ್ಲ. ವಿವಾಹಾನಂತರ ತಂದೆತಾಯಿಗಳು

ಊರಿಗೆ ಹಿಂತಿರುಗುವರು. ಪಾಪ! 'ಸುಭಾ'ಗೆ ಇದೊಂದೂ ಅರ್ಥವಾಗಲಿಲ್ಲ. ಆಕೆ ಬಿಡದೆ ರೋದಿಸತೊಡಗುವಳು. ಅವಳ ರೋದನವನ್ನು ಅರ್ಥಮಾಡಿ ಕೊಳ್ಳುವವರಾರು? ಈ ಕತೆಯಲ್ಲಿ ರವೀಂದ್ರನು 'ಸುಭಾ'ಳ ಮಾನಸಿಕಾ ವಸ್ಥೆಯನ್ನು ಮನಕರಗುವಂತೆ ಚಿತ್ರಿಸಿರುವನಲ್ಲದೆ ಆಗಿನ ಕಾಲದಲ್ಲಿ ರೂಢ ವಾಗಿದ್ದ ಕುಲಮರ್ಯಾದೆಯನ್ನು ವ್ಯಂಗ್ಯವಾಗಿ ಆಕ್ಷೇಪಿಸಿರುವನು.

ಹೆಚ್ಚು ಕಡಿಮೆ ಇಂತಹದೇ ಇನ್ನೊಂದು ಕತೆ 'ಮನೆಗೆ ಬರೋಣ' (The Home-Coming) ಎಂಬುದು. ಇದು 'ಫತಿಕ್' ಎಂಬ ಹುಡುಗ ನೊಬ್ಬನ ವಿಷಾದ ಕತೆ. ತಾಯಿಗೆ ಸಣ್ಣ ಮಗನ ಮೇಲೆ ಹೆಚ್ಚಿನ ಪ್ರೇಮ. ಹಿರಿ ಮಗನಾದ ಫತಿಕ್‌ನನ್ನು ಸರಿಯಾಗಿ ಗಮನಿಸಳು. ಆತನಿಗೆ ಮಾತೃ ಪ್ರೇಮವೂ ತಿಳಿಯದು. ಫತಿಕ್‌ನ ಮಾವನು ಆತನನ್ನು ಕಲ್ಕತ್ತಕ್ಕೆ ಕರೆದೊಯ್ದು ತನ್ನ ಮಕ್ಕಳೊಂದಿಗೆ ಶಾಲೆಗೆ ಕಳುಹಿಸುವೆನೆಂದು ಹೇಳುವನು. ಫತಿಕ್ ಸಂತೋಷ ದಿಂದ ಮಾವನೊಂದಿಗೆ ಹೋಗುವನು. ಆದರೆ ಅವನ ಅತ್ತೆ ಕಠಿಣ ಸ್ವಭಾವ ದವಳು. ಫತಿಕ್ ಅಲ್ಲಿರುವುದು ಆಕೆಗೆ ಹಿಡಿಸಲಿಲ್ಲ. ಆತನನ್ನು ಆದರದಿಂದ ನೋಡಲಿಲ್ಲ. ಹದಿನಾಲ್ಕು ವರ್ಷದ ಫತಿಕ್ ತನ್ನನ್ನು ಎಲ್ಲರೂ ಪ್ರೀತಿಸ ಬೇಕೆಂದು ಹಂಬಲಿಸುವನು. ತನ್ನಿಂದ ಯಾರಿಗಾದರೂ ಪ್ರಯೋಜನವಾಗ ಬೇಕೆಂದು ಪರಿತಪಿಸುವನು. ಮರಳಿ ತನ್ನ ಮನೆಯನ್ನು ಸೇರಬೇಕೆಂದು ಹಂಬ ಲಿಸುವನು. ರಜಾದಿನವು ಎಂದು ಬರುವುದೋ ಎಂದು ಆತುರಪಡುವನು. ಕೊನೆಯಲ್ಲಿ ಆತನಿಗೆ ಮಲೇರಿಯಾ ಜ್ವರ ಬರುವುದು. ತನ್ನ ಅಸ್ವಸ್ಥತೆಯಿಂದ ಲಾಗಿ ಅತ್ತೆಗೆ ತೊಂದರೆಯಾಗಬಾರದೆಂದು ಬಗೆದು ಯಾರಿಗೂ ಹೇಳದೆ ಕಲ್ಕತ್ತದಿಂದ ಗಾಳಿಮಳೆಯಲ್ಲೇ ಹೋಗುವನು. ಮಳೆಯಲ್ಲಿ ನೆನೆದುದರಿಂದ ಜ್ವರ ವಿಪರೀತವಾಗುವುದು. ಮಾವನು ಹುಡುಕುತ್ತ ಬಂದು ಫತಿಕ್‌ನನ್ನು ಮರಳಿ ತನ್ನ ಮನೆಗೆ ಕರೆದೊಯ್ಯುವನು. ಆದರೆ ಪಾಪ, ಫತಿಕ್ 'ಅಮ್ಮಾ, ರಜೆ ಸಿಕ್ಕಿತು' ಎನ್ನುತ್ತಾ ಕಣ್ಮುಚ್ಚುವನು!

ರವೀಂದ್ರನ ಸಣ್ಣಕತೆಗಳ ಮಹತ್ವವಿರುವುದು ಅವುಗಳ ಸರಳಸುಂದರ ನಿರೂಪಣೆಯಲ್ಲಿ. ತನ್ನ ವಿವಿಧಾನುಭವಗಳನ್ನು ತನ್ನ ಎಲ್ಲಾ ಕೃತಿಗಳಲ್ಲಿಯೂ ಒಡಮೂಡಿಸಿರುವನು. ಆದುದರಿಂದಲೇ ಆತನು ಸಾಮಾನ್ಯ ಜನರಲ್ಲಿ ಹುದು ಗಿದ್ದ ಉತ್ತಮ ಗುಣಗಳನ್ನೂ ಪ್ರಕೃತಿ ಮಾನವರೊಳಗೆ ಅನ್ಯೋನ್ಯ ಉಂಟಾಗುವ ಆನಂದವನ್ನೂ ಹೃದಯಂಗಮವಾಗುವಂತೆ ವರ್ಣಿಸಲು ಸಮರ್ಥನಾದನು.

ರವೀಂದ್ರನ ಕತೆಗಳಲ್ಲಿ ಕೆಲವು ಹಾಸ್ಯ ಪ್ರಧಾನವಾದುವು. ಪ್ರತಿವಾಕ್ಯ ದಲ್ಲಿಯೂ ಯಾವುದೋ ವ್ಯಂಗ್ಯ ಧ್ವನಿ ತುಂಬಿ ತುಳುಕಾಡುತ್ತ ಓದುಗರನ್ನು

ಸಗೆಗಡಲಲ್ಲಿ ತೇಲಾಡಿಸುವುದು. ಹೆಚ್ಚಾಗಿ ರವೀಂದ್ರನು ಒಂದು ಕತೆಯನ್ನು ಬರೆದು ಮುಗಿಸಿದ ಕೂಡಲೇ ಶಾಂತಿನಿಕೇತನದ ನಿವಾಸಿಗಳನ್ನೆಲ್ಲ ಕರೆದು ಗಟ್ಟಿಯಾಗಿ ಓದಿಹೇಳುವನು. ವಿನೋದಕರವಾದ ರವೀಂದ್ರನ ಪ್ರತಿಯೊಂದು ವಾಕ್ಯವನ್ನೂ ಎಲ್ಲರೂ ಅತ್ಯಾಸಕ್ತಿಯಿಂದ ಕೇಳುವರು; ನಕ್ಕುನಲಿಯುವರು. ಆತನ ಭಾವಪೂರ್ಣವಾದ ಮಧುರ ಕಂಠದಿಂದ ಹೊರಹೊಮ್ಮುತ್ತಿರುವ ಕತೆಯು ಕೇಳುವವರಿಗೆ ಕರ್ಣರಸಾಯನವಾಗುವುದು.

ರವೀಂದ್ರನ ಕತೆ ಕಾದಂಬರಿಗಳು ಬಂಗಾಳೀಜನಜೀವನವನ್ನು ಸಮಗ್ರವಾಗಿ ನಿರೂಪಿಸುವುವು. ಗತ ಶತಮಾನದಲ್ಲಿ ಬಂಗಾಳದಲ್ಲುಂಟಾದ ಮಾರ್ಪಾಟುಗಳೂ ತಿಳಿದು ಬರುವುವು. ಅವನ ಕಾದಂಬರಿಗಳಲ್ಲಿ ಪ್ರಸಿದ್ಧವಾದ 'ಗೋರಾ'ದಲ್ಲಿ ಕಲ್ಕತ್ತದ ಸಾಂಘಿಕ ಜೀವನವು ಅಂದವಾಗಿ ವರ್ಣಿತವಾಗಿದೆ. 'ಗೋರಾ' 1857ರ ಸಿಪಾಯಿದಂಗೆಯ ಕಾಲದಲ್ಲಿ ಹುಟ್ಟಿದವನು. 'ಗೋರಾ'ನ ತಂದೆತಾಯಿಗಳು ಬ್ರಿಟಿಷರು. ಆದರೆ ಅವನನ್ನು ಹಿಂದುಗಳು ಸಾಕಿಸಲಹುವರು. ಈ ವಿಷಯವು ಕತೆಯು ಅಂತ್ಯವಾಗುವವರೆಗೆ 'ಗೋರಾ'ಗೆ ತಿಳಿಯದು. ಆತನಿಗೆ ಹಿಂದೂದೇಶದ ಮೇಲೂ ಹಿಂದೂ ಮತದ ಮೇಲೂ ಅಧಿಕ ಭಕ್ತಿ, ಆದರ. ಅವನು ಬೆಳೆದು ದೊಡ್ಡವನಾಗಿ ದೇಶನಾಯಕನಾಗುವನು. ಗೋರಾ ಕಾದಂಬರಿಯಲ್ಲಿ ರವೀಂದ್ರನು ಆಗಿನ ನೂತನ ಹಿಂದೂ ಮತದ ನಾಯಕರನ್ನೂ ಬ್ರಹ್ಮಸಮಾಜದವರನ್ನೂ ಚಿತ್ರಿಸಿರುವನು. ಗೋರಾ ನೂತನ ಹಿಂದೂಧರ್ಮಾವಲಂಬಿ; ನಿಷ್ಕಪಟಿ; ಉತ್ತಮ ಭಾವನೆಗಳಿಂದ ಕೂಡಿದವನು. ಆದರೆ ಆತನ ಅನುಚರರಲ್ಲಿ ಕೆಲವರು ಮಾತ್ರ ಅಂಥವರಲ್ಲ. ಗೋರಾನಿಗೂ ಆತನ ಮಿತ್ರ 'ವಿನಯ'ನಿಗೂ ಬ್ರಹ್ಮಸಮಾಜ ಕುಟುಂಬವೊಂದರ ಪರಿಚಯವಾಗುವುದು. ಈ ಕುಟುಂಬದವರು ಹೆಚ್ಚಿನ ಮಟ್ಟಿಗೂ ಪಾಶ್ಚಾತ್ಯ ಪದ್ಧತಿಯನ್ನು ಅನುಸರಿಸುವವರು. ಗೋರಾನಿಗೆ ಅವರ ಸ್ವಭಾವ ಪದ್ಧತಿಗಳು ಸರಿಬೀಳವು. ಆದರೆ ಆ ಕುಟುಂಬದವರ ಉದಾರ ಸ್ವಭಾವ, ವಿದ್ಯಾವಿವೇಕಾದಿಗಳು ಆತನನ್ನು ಆಕರ್ಷಿಸುವುವು. ಕಾದಂಬರಿಯಲ್ಲಿ ಮುಖ್ಯವಾದುದು ಗೋರಾನ ಮನಸ್ಸಿನಲ್ಲಾಗುವ ಸಂಘರ್ಷಣೆ. ಈ ಕಾದಂಬರಿಯಲ್ಲಿ ಸಂಕುಚಿತ ಮನೋಭಾವವುಳ್ಳ ಹಿಂದುಗಳನ್ನೂ ವಿಶಾಲದೃಷ್ಟಿಯಿಲ್ಲದ ಬ್ರಹ್ಮಸಮಾಜದವರನ್ನೂ ಕವಿ ಬಹು ಸೊಗಸಾಗಿ ಚಿತ್ರಿಸಿರುವನು. ಇಲ್ಲಿ ಬರುವ ಸ್ತ್ರೀಪಾತ್ರಗಳು ಸಹಜ ಮನೋಹರವಾಗಿ ಪೋಷಿಸಲ್ಪಟ್ಟಿವೆ. ಗೋರಾನ ಸಾಕುತಾಯಿ 'ಆನಂದಮಯಿ'ಯ ಸ್ವಾರ್ಥತ್ಯಾಗ, ವಿಶಾಲ ಹೃದಯ ಎಂದೆಂದೂ ಮರೆಯತಕ್ಕುದಲ್ಲ.

ರವೀಂದ್ರನ ಇನ್ನೊಂದು ಸುಂದರ ಕಾದಂಬರಿ 'ಮನೆಯೂ ಜಗತ್ತೂ'. ಗೋರಾದಲ್ಲಿ ಹಲವು ಪಾತ್ರಗಳಿದ್ದರೆ ಇದರಲ್ಲಿ ಕೇವಲ ಮೂರೇ ಪಾತ್ರಗಳು— ನಿಖಿಲ್, ಇವನ ಪತ್ನಿ ಮತ್ತು ಮಿತ್ರ ಸಾಂದೀಪ್. ನಿಖಿಲ್ ಒಬ್ಬ ಶ್ರೀಮಂತ ಭೂಮಾಲಿಕ; ತುಂಬ ಓದಿಕೊಂಡವನು; ಉತ್ತಮ ದೇಶಭಕ್ತ. ಆದರೆ ಹಿಂಸಾ ಪದ್ಧತಿ ಆತನಿಗೆ ಹಿಡಿಸದು. ತನ್ನ ಸುತ್ತುಮುತ್ತಣ ಗ್ರಾಮಗಳನ್ನು ಅಭಿವೃದ್ಧಿ ಗೊಳಿಸಲು ಪ್ರಯತ್ನಿಸುವನು. ಆದರೆ ಅವನ ಮಿತ್ರ ಸಾಂದೀಪನ ದೃಕ್ಪಥವೇ ಬೇರೆ. ವಿದೇಶ ವಸ್ತುಗಳನ್ನು ನಾಶಮಾಡಬೇಕೆಂದೂ ಬಲತ್ಕಾರದಿಂದಲಾದರೂ ಸ್ವಾತಂತ್ರ್ಯಹೊಂದಬೇಕೆಂದೂ ಆತನು ಸಾರುವನು. ನಿಖಿಲ್ ಸ್ವದೇಶೀ ವಸ್ತ್ರಗಳನ್ನು ಪ್ರೋತ್ಸಾಹಿಸುವನು. ಆದರೆ ತನ್ನ ಗ್ರಾಮದಲ್ಲಿ ವಿದೇಶೀ ವಸ್ತ್ರಗಳ ಮಾರಾಟವನ್ನು ನಿಷೇಧಿಸಿ, ಗ್ರಾಮಸ್ಥರೆಲ್ಲ ಸ್ವದೇಶೀ ಬಟ್ಟೆಗಳನ್ನೇ ಕೊಂಡು ಕೊಳ್ಳಬೇಕೆಂದು ನಿರ್ಬಂಧಿಸಲಾರನು. ಸಾಂದೀಪನ ಅನುಯಾಯಿಗಳು ನಿಖಿಲ್‌ನ ಗ್ರಾಮದಲ್ಲೊಂದು ವಿದೇಶೀ ವಸ್ತ್ರಗಳ ಅಂಗಡಿಗೆ ಬೆಂಕಿಕೊಡುವರು. ಪರಿಣಾಮವಾಗಿ ಅಂಗಡಿಯವನು ನಿರಾಶ್ರಿತನಾಗುವನು. ನಿಖಿಲ್ ತನ್ನ ಪತ್ನಿಗೆ ವಿದ್ಯೆಯನ್ನು ಕಲಿಸಲು ತೊಡಗುವನು. ಆದರೆ ಕೆಲವು ಕಾಲ ಆಕೆ ಸಾಂದೀಪನ ಉಪದೇಶಗಳನ್ನೇ ಕೇಳುವಳು. ಆಕೆಗೆ ಶಿಕ್ಷಣವನ್ನೀಯುತ್ತಿದ್ದ ಆಂಗ್ಲ ಯುವತಿ ಸಾಂದೀಪನ ಅನುಯಾಯಿಗಳಿಗೆ ಹೆದರಿ ಊರು ಬಿಟ್ಟು ಹೋಗುವಳು. ನಿಖಿಲ್ ನಿಲ್ದಾಣದ ವರೆಗೆ ಹೋಗಿ ಆಕೆಯನ್ನು ಆದರದಿಂದ ಬೀಳ್ಕೊಡುವನು. ನಿಖಿಲ್‌ನ ಪತ್ನಿ ವಿಮಲೆಳಿಗೆ ಇದು ಇಷ್ಟವಿಲ್ಲ. ಆಕೆ ಗಂಡನನ್ನು ದೇಶದ್ರೋಹಿಯೆಂದು ನಿಂದಿಸುವಳು! ಈ ಕತೆ ವಿಮಲ, ನಿಖಿಲ್ ಸಾಂದೀಪರನ್ನು ಸುತ್ತಿಕೊಂಡಿದೆ. ಪ್ರತಿಯೊಬ್ಬರು ಅವರವರ ಹೃದ್ಗತಾಭಿಪ್ರಾಯಗಳನ್ನು ಹೊರಗೆಡಹುವರು. ಈ ಮೂವರ ಅನ್ಯೋನ್ಯ ಸಂಬಂಧವು ಸುಂದರವಾಗಿ ಚಿತ್ರಿಸಲಾಗಿದೆ. ಇದೇ ಈ ಕತೆಯ ಜೀವಾಳ.

'ನಾಲ್ಕು ಅಧ್ಯಾಯಗಳು' ಎಂಬ ಕತೆಯಲ್ಲಿ ರವೀಂದ್ರನು ಆಗಿನ ಕಾಲದ ರಾಜಕೀಯ ಪರಿಸ್ಥಿತಿಗಳನ್ನು ವರ್ಣಿಸಿರುವನು. 'ನೌಕಾಘಾತ'ವು ಕೌಟುಂಬಿಕ ಕತೆ. ನೂತನ ವಧೂವರರ ತಂಡವೊಂದು ನೌಕೆಯಲ್ಲಿ ಕುಳಿತು ನದಿಯನ್ನು ದಾಟುತ್ತಿರುವಾಗ, ಮಧ್ಯದಲ್ಲಿ ಬಿರುಗಾಳಿ ಎದ್ದು ನೌಕೆ ನೀರುಪಾಲಾಗುವುದು. ವರನು ದಡಕ್ಕೆ ಒಗೆಯಲ್ಪಡುವನು. ಮೂರ್ಛೆ ತಿಳಿದೆದ್ದಾಗ ತನ್ನ ಪಕ್ಕದಲ್ಲೇ ಬಿದ್ದಿದ್ದ ಪೀತಾಂಬರವನ್ನುಟ್ಟ ಬಾಲಿಕೆಯನ್ನು ನೋಡಿ ಈಕೆ ತನ್ನ ಪತ್ನಿಯಾಗಿರ ಬೇಕೆಂದು ಭಾವಿಸುವನು. ಮದುವೆಯ ಕಾಲದಲ್ಲಿ ಆತನು ನಾಚಿಕೆಯಿಂದ ವಧುವನ್ನು ಸರಿಯಾಗಿ ನೋಡಿರಲಿಲ್ಲ. ಮನೆಗೆ ಕರೆದೊಯ್ದು ತರುವಾಯ ಆ

ಹುಡುಗಿ ತನ್ನ ಪತ್ನಿಯಲ್ಲವೆಂದು ಗೊತ್ತಾಗುವುದು. ಈ ವಿಚಾರವನ್ನು ಆಕೆ ಯೊಂದಿಗೆ ಹೇಳಿಬಿಟ್ಟರೆ ಎಲ್ಲಿ ಮನೆಬಿಟ್ಟು ಹೋಗಿಬಿಡುವಳೋ ಎಂಬ ಭಯ ಆತನಿಗೆ. ಮನೆಯಲ್ಲೇ ಇಟ್ಟುಕೊಂಡು ತನ್ನ ಪತ್ನಿಯೆಂದು ಒಪ್ಪಿಕೊಳ್ಳಲು ಮನಸ್ಸೊಪ್ಪದು. ಈ ಸಂದಿಗ್ಧಾವಸ್ಥೆಯಲ್ಲಿ ಹೇಗೆ ವರ್ತಿಸಬೇಕೆಂದು ತಿಳಿಯದೆ ಬಾಧೆ ಪಡುವನು. ಕೊನೆಯಲ್ಲಿ ಬೇರೆ ಕೆಲವು ವಿಚಿತ್ರ ಘಟನೆಗಳು ನಡೆದು ಕತೆ ಸುಖಾಂತ್ಯವಾಗುವುದು.

ರವೀಂದ್ರನು ಕತೆಗಳನ್ನು ಗದ್ಯ-ಪದ್ಯಗಳಲ್ಲಿ ಬರೆದಿರುವನು. ಬಹಳ ಮಟ್ಟಿಗೆ ಈತನ ಕಥಾವಸ್ತುಗಳೆಲ್ಲವೂ ಭಾರತ ಚರಿತ್ರೆಗೆ ಸಂಬಂಧಿಸಿದುವೇ. ಭಾರತ ವೀರ ಪುರುಷರ ದೇಶಭಕ್ತಿ, ಧೈರ್ಯ ಸಾಹಸಗಳು, ಅದ್ಭುತ ಕೃತ್ಯಗಳು ವರ್ಣಿತವಾದ ಪದ್ಯಕಥೆಗಳು ಕೆಲವು. ಅವರ ಜೀವನದ ವಿಷಾದ ಸಂಘಟನೆ ಗಳನ್ನು ವರ್ಣಿಸುವುವು ಇನ್ನು ಕೆಲವು. ರವೀಂದ್ರನಿಗೆ ಬೌದ್ಧೇತಿಹಾಸದಲ್ಲಿ ಬಹಳ ಪ್ರೀತಿ. ಇದರ ಆಧಾರದಿಂದ 'ನಟೀರ್ ಪೂಜೆ', 'ಚಂಡಾಲಿಕ', 'ಶ್ಯಾಮ' ಮೊದಲಾದ ನಾಟಕಗಳನ್ನು ರಚಿಸಿರುವನು. ಸಮಕಾಲೀನ ಘಟನೆಗಳ ಆಧಾರ ದಿಂದ ಕೆಲವು ಪದ್ಯಕಥೆಗಳನ್ನು ಬರೆದಿರುವನು. ಇವುಗಳಲ್ಲೊಂದಾದ 'ಸಮುದ್ರ ತರಂಗ'ದಲ್ಲಿ ಯಾತ್ರಿಕರ ಹಡಗವು ತುಫಾನಿಗೆ ಸಿಲುಕಿ ಮುಳುಗಿ ಹೋಗುವ ಭವ್ಯ ವರ್ಣನೆ ಇದೆ.

1919ರ ಅನಂತರದ ರವೀಂದ್ರನ ಜೀವನವು ದೇಶಾಟನೆಗಳಿಂದಲೂ ವಿವಿಧ ಚಟುವಟಿಕೆಗಳಿಂದಲೂ ತುಂಬಿತ್ತು. ಆದರೆ ಯಾವ ಕಾರ್ಯದಲ್ಲಿ ಮಗ್ನನಾಗಿ ದ್ದರೂ ತನ್ನ ಸುತ್ತುಮುತ್ತಣ ಸಾಮಾನ್ಯ ವಸ್ತುಗಳ ಸೌಂದರ್ಯವನ್ನು ಆಸ್ವಾದಿ ಸದಿರಲಿಲ್ಲ. ಶಾಂತಿನಿಕೇತನದ ಸಮೀಪದಲ್ಲಿರುವ 'ಕೋಪಾಯ್' ಎಂಬ ಚಿಕ್ಕ ಹೊಳೆಯ ಸೊಬಗನ್ನು ಒಂದು ಪದ್ಯದಲ್ಲಿ ವರ್ಣಿಸಿರುವನು. ಇದರ ಸೌಮ್ಯ ಸೌಂದರ್ಯವನ್ನು ಶಿಲೇದಾದಲ್ಲಿರುವ ಪದ್ಮಾನದಿಯ ಗಭೀರತೆಯೊಂದಿಗೆ ಹೋಲಿಸಿ ರುವನು. ನಗುನಗುತ್ತಾ ಕೆಲಸ ಮಾಡುವ 'ಸಂತಾಲ್' ಹುಡುಗಿಯೊಬ್ಬಳನ್ನು ಕುರಿತು ಬರೆದ ಪದ್ಯ ಇನ್ನೊಂದು. ಮತ್ತೊಂದರಲ್ಲಿ ಮುದಿ ರೈತನೊಬ್ಬನು ಧೂಳಿ ಧೂಸರಿತವಾದ ಮಾರ್ಗದಲ್ಲಿ ಮಾಲುತ್ತಾ ಸಂತೆಗೆ ಹೋಗುವುದರ ಶಬ್ದ ಚಿತ್ರವನ್ನು ಚಿತ್ರಿಸಿರುವನು. ಮಾನವ ಜೀವನದಲ್ಲಿ ರತಕ್ಕ ಆನಂದವು ರವೀಂದ್ರನ ಜೀವನದಲ್ಲಿ ಕೊನೆಯ ತನಕವಿತ್ತು. ಆತನು ಮಹಾತತ್ವವೇತ್ತನು, ಅಧ್ಯಾಪಕನು, ದೇಶಭಕ್ತನು ಮತ್ತು ಮಾನವ ಸೇವಕನು. ಆದರೆ ಎಲ್ಲಕ್ಕಿಂತ ಮಿಗಿಲಾಗಿ ಆತನು ಕವಿ, ಗಾಯಕ ಹಾಗೂ ಕಲಾವಿದ. ಕವಿಗಿದ್ದ ಅಪರಿಮಿತ ವಿಶ್ವ

ಪ್ರೇಮವು ಆತನ 'ಬಾಲಕ'ವೆಂಬ ಕವನಸಂಗ್ರಹದಲ್ಲಿ ಕಂಡುಬರುವುದು. ಅದರ ಭಾವಾನುವಾದವು ಹೀಗಿದೆ:—

'ಕಾಂತಿಪೂರ್ಣ ಭೂಮಾತೆಯನಿವಳನು
ಹೃತ್ಪೂರ್ವಕ ನಾ ಪ್ರೇಮಿಸಿಹೆ.
ಎನ್ನ ಜೀವನದಿ ಹಲವು ನೋವುಗಳ
ಮೇಲಿಂಮೇಲನುಭವಿಸಿರುವೆ.
ಎನಿತೊ ಸಂಜೆ ಮುಂಜಾನೆಗಳೆನ್ನೀ
ಜೀವಿತ ಕಾಲದೊಳುರುಳಿಹವು.
ಇಂದು ಜೀವನವು ಐಕ್ಯವಾಗಿಹುದು
ಚಂದ್ರ ಸೂರ್ಯ ಭೂ ಜಲಧಿ ಗಗನದಲಿ.
ಇಂತು ಹೃದಯವನು ಜಯಿಸೆ ಜೀವನವು
ಕಾಂತಿಪೂರ್ಣ ಭೂಮಾತೆಗೊಲಿದೆನ್ನೈ.'

## ಅಧ್ಯಾಯ ೧೩.

## ನಾಟಕಗಳೂ ನಟನೆಯೂ

ನಾಟ್ಯರಂಗಕ್ಕೆ ರವೀಂದ್ರನು ಸಲ್ಲಿಸಿದ ಸೇವೆಯನ್ನು ವಿವರಿಸದೆ ಹೋದರೆ ಆತನ ಜೀವನ ಚರಿತ್ರೆಯು ಪರಿಪೂರ್ಣವಾಗದು. ರವೀಂದ್ರನಿಗೆ ಚಿಕ್ಕಂದಿನಿಂದಲೂ ನಾಟಕದಲ್ಲಿ ಹೆಚ್ಚಿನ ಆಸಕ್ತಿ. ಚಿಕ್ಕವನಿದ್ದಾಗ ರವಿಯ ಅಣ್ಣಂದಿರು ಮನೆಯಲ್ಲಿ ನಾಟಕವನ್ನು ಪ್ರದರ್ಶಿಸುತಿದ್ದರು. ರವಿ ಇತರ ಮಕ್ಕಳೊಂದಿಗೆ ಜಗಲಿಯಲ್ಲಿ ಕುಳಿತು ಮನೆಗೆ ಬರುತ್ತಿದ್ದ ಅತಿಥಿಗಳನ್ನು ನೋಡುತಿದ್ದನು. ದೂರದಿಂದ ನಾಟಕದವರ ಮಾತುಗಳು ಕೇಳುತಿದ್ದುವು. ಆ ದಿನಗಳಲ್ಲಿ ನಾಯಿಕಾ ಪಾತ್ರವನ್ನು ಪುರುಷನೇ ವಹಿಸುತಿದ್ದನು. ತುಸು ದೊಡ್ಡವನಾದ ಮೇಲೆ ರವೀಂದ್ರನೂ ಅಣ್ಣಂದಿರೊಂದಿಗೆ ನಾಟಕದಲ್ಲಿ ಪಾತ್ರವಹಿಸಿದನು; ನಾಟಕಗಳನ್ನೂ ಬರೆದನು. ಆತನ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಅವರ ಮನೆಯಲ್ಲಿ ನಟಿಸುವುದಕ್ಕಾಗಿಯೇ 'ವಾಲ್ಮೀಕಿ ಪ್ರತಿಭೆ'ಯನ್ನು ರಚಿಸಿದನು. ಆತನು ಬರೆದ ಬೇರೆ ಕೆಲವು ನಾಟಕಗಳನ್ನು ಈ ಮೊದಲೇ ಸಂದರ್ಭೋಚಿತವಾಗಿ ಹೆಸರಿಸಲಾಗಿದೆ.

ರವೀಂದ್ರನ ಕೆಲವು ನಾಟಕಗಳು ಬಹುಮಟ್ಟಿಗೆ ಇಂಗ್ಲಿಷ್ ನಾಟಕಗಳ ಸಂಭಾಷಣೆ, ಅಭಿನಯಗಳನ್ನು ಹೋಲುವಂತಿವೆ. ಇನ್ನು ಕೆಲವು ಸಂಭಾಷಣೆ



ರವೀಂದ್ರನು ವಾಲ್ಮೀಕಿಯ ಪಾತ್ರದಲ್ಲಿ

ಗಳಿಲ್ಲದೆ ಪೂರ್ತಿಯಾಗಿ ಹಾಡುಗಳಿಂದಲೂ ನೃತ್ಯಗಳಿಂದಲೂ ಅಭಿನಯಿಸುವಂಥವು. ಸಂಭಾಷಣೆಯೇ ಪ್ರಧಾನವಾಗಿರುವ ನಾಟಕಗಳಲ್ಲಿ ಕೂಡ ಕತೆಯಲ್ಲಿರುವ ಮುಖ್ಯ ಭಾವಗಳನ್ನು ಅಲ್ಲಲ್ಲಿ ಹಾಡುಗಳ ಮೂಲಕ ನಿರೂಪಿಸಿರುವನು. ರವೀಂದ್ರನು ಮುಖ್ಯವಾಗಿ ಕವಿ. ಕವಿಯೇ ನೂತನ ಬ್ರಹ್ಮ. ಆತನ ಸೃಷ್ಟಿಯೇ ಕಾವ್ಯ. ಆತನ ಪ್ರತಿಯೊಂದು ನಾಟಕದಲ್ಲಿಯೂ ನಾವೀನ್ಯತೆ ಕಂಡುಬರುತ್ತದೆ. ಸಂಭಾಷಣಾ ಪ್ರಧಾನವಾದ ನಾಟಕಗಳು ಒಮ್ಮೊಮ್ಮೆ ಗೀತಾನಾಟಕಗಳಾಗಿ ಮಾರ್ಪಡುವುವು. ಹೀಗೆ ಪ್ರತಿ ಸರ್ತಿಯೂ ನಾಟಕವು ನೋಡುವವರಿಗೆ ನೂತನವಾಗಿ ತೋರುವುದು.

1922ರಲ್ಲಿ ರವೀಂದ್ರನು ಬರೆದ 'ಮುಕ್ತಧಾರಾ' ನಾಟಕವು ಬಹಳ ಪ್ರಶಂಸನೀಯವಾದುದು. ಇದರ ಕತೆ 'ಉತ್ತರ ಕೂಟ' ಮತ್ತು 'ಶಿಯುತ ರಾಯ್' ಎಂಬೆರಡು ರಾಷ್ಟ್ರಗಳಿಗೆ ಸಂಬಂಧಿಸಿದುದು. ಇವುಗಳಲ್ಲಿ ಶಿಯುತ ರಾಯ್ ಉತ್ತರ ಕೂಟದ ಅಧಿರಾಜ್ಯವಾಗಿತ್ತು. ಉತ್ತರ ಕೂಟವು ಸ್ವಲಾಭಕ್ಕಾಗಿ ಶಿಯುತರಾಯ್‌ಯ ವಿದೇಶವ್ಯಾಪಾರವನ್ನು ತಡೆಗಟ್ಟಿತು. ಶಿಯುತ ರಾಯ್‌ಗೆ ರಾಜಪ್ರತಿನಿಧಿಯಾಗಿ ಬಂದಿದ್ದ ಉತ್ತರ ಕೂಟದ ರಾಜಕುಮಾರನಾದ 'ಅಭಿಜಿತ್' ಬಹಳ ಉದಾರ ಸ್ವಭಾವದವನು. ಆತನು ಹೆದ್ದಾರಿಗಳನ್ನು ಸ್ವೇಚ್ಛೆಯಿಂದ ಬಿಡಿಸಿ ಪ್ರಜೆಗಳು ತಮ್ಮ ಕಷ್ಟ ತೀರುವಲ್ಲಿವರೆಗೆ ಕರಿಗೆ ಕೊಡಬೇಡವೆಂದು ಶಾಸನವನ್ನು ಹೊರಡಿಸಿದನು. ಉತ್ತರಕೂಟ ಪ್ರಭುತ್ವವು ಮಾತ್ರ ಅಷ್ಟು ಉದಾರ ಬುದ್ಧಿಯುಳ್ಳುದಲ್ಲ. ಅದು 'ಮುಕ್ತಧಾರಾ'ದ ನೀರು ಶಿಯುತ ರಾಯ್‌ಗೆ ಹೋಗದಂತೆ, ಬಲವಾದ ಅಣೆಕಟ್ಟು ಕಟ್ಟುವಂತೆ ಪ್ರಸಿದ್ಧ ಇಂಜಿನಿಯರನಿಗೆ ಆಜ್ಞಾಪಿಸಿತು. ಅಣೆಕಟ್ಟು ಪೂರ್ಣವಾಗುವ ದಿನ ಉತ್ತರಕೂಟದ ಜನರು ಉತ್ಸವವನ್ನು ಆಚರಿಸುವುದರೊಂದಿಗೆ ದೇವಾಲಯಗಳಲ್ಲಿ ವಿಶೇಷ ಪ್ರಾರ್ಥನೆಗಳನ್ನೂ ಮಾಡಿದರು. ಪ್ರಾರ್ಥನೆಗಾಗಿ ಬೀದಿಯಲ್ಲಿ ಹೋಗಿ ಬರುವ ಜನರಿಂದ ಕಿಕ್ಕಿರಿದ ದೃಶ್ಯವೇ ನಾಟಕದ ಆರಂಭ. ಈ ದೃಶ್ಯದಲ್ಲಿ ಉತ್ತರ ಕೂಟದ ರಾಜ, ಮಂತ್ರಿಗಳು, ಯುವರಾಜ ಅಭಿಜಿತ್, ಎರಡು ದೇಶದ ಪ್ರಜೆಗಳು, ಶಿಯುತರಾಯ್‌ಗೆ ಸೇರಿದ ಯೋಗಿಧನಂಜಯ, ಅಧ್ಯಾಪಕ ವಿದ್ಯಾರ್ಥಿಯರು, ದೇವಾಲಯಕ್ಕೆ ಹೋಗುತ್ತಲೂ ಬರುತ್ತಲೂ ಇರುವರು. ಉತ್ತರ ಕೂಟದ ಅಧ್ಯಾಪಕನು ಮಕ್ಕಳಿಗೆ ಕೆಲವು ವಿಷಯಗಳನ್ನು ಗಿಳಿಪಾಠ ಮಾಡಿಸುವನು. ಚರಿತ್ರೆಯಲ್ಲಿ ಉತ್ತರ ಕೂಟದ ಕೀರ್ತಿಯನ್ನೂ ಪ್ರತಿಯುದ್ಧದಲ್ಲಿ ಗಳಿಸುವ ನ್ಯಾಯವಾದ ಜಯವನ್ನೂ ಕುರಿತು ಮಕ್ಕಳು ಕಲಿಯುವರು. ಇಷ್ಟೇ ಅಲ್ಲದೆ ಶಿಯುತರಾಯ್ ದೇಶದವರನ್ನು ದ್ವೇಷಿಸಲೂ ಕಲಿಯುವರು. ಇದಕ್ಕೆ

ಅವರ ನಾಸಿಕಗಳಿಗೂ ಉತ್ತರಕೂಟದವರ ನಾಸಿಕಗಳಿಗೂ ಇರುವ ವ್ಯತ್ಯಾಸವೇ ಕಾರಣ!

ಈ ಕತೆಯಲ್ಲಿ ರಾಜಕೀಯಾಭಿಪ್ರಾಯವು ಸ್ಪಷ್ಟವಾಗಿದೆ. ಉತ್ತರಕೂಟದ ಅಧ್ಯಾಪಕನಂತಿರುವವರು ಎಲ್ಲಾ ದೇಶಗಳಲ್ಲಿಯೂ ಇರುವರು. ಇವರು ಚರಿತ್ರೆಯನ್ನು ತಪ್ಪಾಗಿ ವ್ಯಾಖ್ಯಾನಿಸಿ ನಿರ್ಮಲಹೃದಯಿಗಳಾದ ಚಿಕ್ಕಮಕ್ಕಳಲ್ಲಿ ಇತರ ದೇಶಗಳವರ ಮೇಲೆ ದ್ವೇಷಾಸೂಯೆಗಳನ್ನು ಹುಟ್ಟಿಸುವರು. ರಂಗಸ್ಥಳದಲ್ಲಿ ಅಣೆಕಟ್ಟು ಕಟ್ಟುವುದಕ್ಕೆ ಉಪಯೋಗಿಸಿದ ಯಂತ್ರವು ದೇವಾಲಯವನ್ನು ಮರೆಸುವುದು. ಶಿಯುತರಾಯ್‌ಯ ಪ್ರಜೆಗಳನ್ನು ನಾಶಮಾಡಿದ ಈ ಯಂತ್ರವು, ರವೀಂದ್ರನು ಜಪಾನಿನಲ್ಲಿ ರಾಷ್ಟ್ರೀಯತೆಯ ಕುರಿತು ಉಪನ್ಯಾಸ ಮಾಡುತ್ತಿದ್ದಾಗ ಹೆಸರಿಟ್ಟ 'ಯಂತ್ರಪ್ರಭುತ್ವ'ವನ್ನು ಸೂಚಿಸುವುದು. ಆ ಅಣೆಕಟ್ಟನ್ನು ಕಟ್ಟಿದ ಮೇಧಾವಿಗಳಿಗೆ ಭಗವಂತನ ಹಾಗೂ ಶಿಯುತರಾಯ್ ಪ್ರಜೆಗಳ ಗೊಡವೆಯಿಲ್ಲ. ಪೀಡಿತರಾದ ಮತ್ತು ನಿರಾಶೆಹೊಂದಿದ ಪ್ರಜೆಗಳು ತಮ್ಮ ರಾಜರ ವಿರುದ್ಧ ದಂಗೆಯೇಳಲು ಸಿದ್ಧರಾಗುವರು. ಆದರೆ ಸಂತ ಧನಂಜಯನು ಇದನ್ನು ಬಲವಾಗಿ ಖಂಡಿಸುವನು ಮತ್ತು ಅಹಿಂಸಾತ್ಮಕ ಚಳವಳವೇ ನಿಜವಾದ ಜಯವನ್ನು ತರುವುದೆಂದು ಹೇಳುವನು. ರವೀಂದ್ರನು ತನ್ನ ಅಭಿಪ್ರಾಯವನ್ನು ಧನಂಜಯನ ಮೂಲಕ ಹೇಳಿಸುವನು—'ಒಂದು ಕಾಲು ಕುಂಟಾಗುವುದಕ್ಕಿಂತ ಹೆಚ್ಚಿನ ಅನರ್ಥವೇನಿದೆ? ಪ್ರಜೆಗಳಿಗೆ ಸಂಬಂಧಿಸದ ಪ್ರಭುತ್ವವು ಕುಂಟಾದಂತೆಯೇ! ಆ ಒಂಟಿಕಾಲಿನ ಸರಕಾರವು ಕುಂಟುತ್ತಾ ನಡೆಯುವುದನ್ನು ನೋಡಿ ನೀವು ಭಯದಿಂದ ನಡುಗಬಹುದು. ಆದರೆ ಪರಮಾತ್ಮನ ಕಣ್ಣುಗಳು ಅಶ್ರುಪೂರ್ಣವಾಗುವುವು. ರಾಜನ ಕ್ಷೇಮಕ್ಕಾಗಿಯಾದರೂ ಓ ಪ್ರಜೆಗಳಿರಾ, ನೀವು ಈ ಅಧಿಕಾರವನ್ನು ಸಾಧಿಸಲೇ ಬೇಕು.'

ಧನಂಜಯನ ಇಂತಹ ಮಾತುಗಳಿಂದ ಭಾರತ ಬ್ರಿಟನುಗಳೊಳಗಿನ ಸಂಬಂಧವು ಸ್ಪಷ್ಟವಾಗುವುದು. ಈ ಧನಂಜಯನ ಪಾತ್ರವನ್ನು ರವೀಂದ್ರನ 'ಪ್ರಾಯಶ್ಚಿತ್ತ' ನಾಟಕದಿಂದ ಉದ್ಧರಿಸಲಾಗಿದೆ.

ನಾಟಕದಲ್ಲಿ ಭಯಂಕರ ಮೂರ್ತಿಯಾದ ರುದ್ರನನ್ನು ಸ್ತುತಿಸುತ್ತಾ ಭಕ್ತರು ರಂಗಸ್ಥಳದಲ್ಲಿ ಬಂದುಹೋಗುತ್ತಿರುವರು. ಅನ್ಯಾಯಕ್ಕೆ ತಕ್ಕ ಪ್ರತಿಕ್ರಿಯೆಯನ್ನೆಸಗಬೇಕೆಂದು ಪ್ರಾರ್ಥಿಸುತ್ತಿರುವರು. ಅವರ ಈ ಅದೃಶ್ಯ ದೇವತಾರಾಧನೆಯೇ ನಾಟಕದ ಹಿನ್ನೆಲೆ. ಧನಂಜಯನ ಗೀತಗಳಲ್ಲಿ ರಾಜಕೀಯ ಧರ್ಮ ಮಾತ್ರವಲ್ಲದೆ ಮಹತ್ವವಾದ ಜೀವಿತ ಘಟ್ಟಗಳು ಅಡಕವಾಗಿವೆ.

ನಾಟಕಾಂತದಲ್ಲಿ ಶಿಯುತರಾಯ್ ಪ್ರಜೆಗಳ ಸ್ವಾತಂತ್ರ್ಯ, ನ್ಯಾಯ, ಧರ್ಮಗಳ ರಕ್ಷಣೆಗಾಗಿ ಬದ್ಧಕಂಕಣನಾದ ಯುವರಾಜ ಅಭಿಜಿತ್ ಸ್ವತಃ ಅಣೆಕಟ್ಟನ್ನು ಭೇದಿಸಲು ಹೋಗುವನು. ಭೇದಿಸಿದಾಗ ತಾನು ಪ್ರವಾಹದಲ್ಲಿ ಕೊಚ್ಚಿ ಹೋಗುವೆನೆಂಬುದನ್ನು ಅರಿತಿದ್ದರೂ ಗಣನೆಗೆ ತರುವುದಿಲ್ಲ. ಕೊನೆಯ ದೃಶ್ಯವು ಅದ್ಭುತವಾಗಿರುವುದು. ಶಿವನ ತಾಂಡವನೃತ್ಯವು ನಡೆಯುತ್ತಿರುವಾಗ ಧನಂಜಯನು ಗಂಭೀರವಾಗಿ ಹಾಡುತ್ತಾ ಪ್ರಾಪ್ತವಾದ ಸ್ವಾತಂತ್ರ್ಯವನ್ನು ಸ್ವಾಗತಿಸುವನು. ದೂರದಲ್ಲಿ ಸ್ವೇಚ್ಛೆಯಿಂದ ಗಂಭೀರವಾಗಿ ಪ್ರವಹಿಸುತ್ತಿರುವ ಮುಕ್ತಧಾರಾ ಗರ್ಜನೆ ಕೇಳಿಸುವುದು.

1927ರಲ್ಲಿ ರಚಿಸಿದ 'ನಟಿರ್ ಪೂಜಾ' ನಾಟಕವು ರವೀಂದ್ರನ ಅಚ್ಚುಮೆಚ್ಚಿನದು. ಕಲ್ಕತ್ತದಲ್ಲಿ ಇದನ್ನು ಮೊತ್ತಮೊದಲು ಪ್ರದರ್ಶಿಸಿದಾಗ ಎಲ್ಲರೂ ಅತ್ಯಾಶ್ಚರ್ಯಗೊಂಡರು. ಆ ನಾಟಕದಲ್ಲಿ ಮೊದಲಬಾರಿಗೆ ಬಂಗಾಳದ ಉಚ್ಚ ಕುಟುಂಬಕ್ಕೆ ಸೇರಿದ ಕನ್ನಿಕೆಯರು ಭಾಗವಹಿಸಿ ನರ್ತನ ಮಾಡಿದರು. ಕೆಲವರು ಇದನ್ನು ಕಟುವಾಗಿ ಟೀಕಿಸಿದರು. ಆದರೆ ನಾಟಕದಲ್ಲಿನ ಉದಾತ್ತ ಭಾವನೆಗಳೂ ಸುಂದರ ನೃತ್ಯಗಳೂ ಅವರ ಟೀಕೆಯನ್ನು ಕೂಡಲೇ ಅಣಗಿಸಿದುವು. ಭಾರತದ ದಿವ್ಯ ಕಲೆಗಳಲ್ಲೊಂದಾದ ನೃತ್ಯಕಲೆಗೆ ಉನ್ನತ ಸ್ಥಾನವೂ ಲಭಿಸಿತು.

ಈ ನಾಟಕವು ಬೌದ್ಧಪುರಾಣದ ಆಧಾರದಿಂದ ಬರೆದುದು. ನಾಟ್ಯರಾಣಿ ಶ್ರೀಮತಿ ಮಗಧರಾಜನ ಆಸ್ಥಾನ ನರ್ತಕಿ. ಮಗಧರಾಜನು ಬುದ್ಧನ ಉಪದೇಶದಿಂದ ಬೌದ್ಧಮತವನ್ನು ಸ್ವೀಕರಿಸುವನು. ಅವನ ಕುಮಾರನೂ ಬೌದ್ಧಭಿಕ್ಷುವಾಗುವನು. ಆದರೆ ಅವನ ಎರಡನೆಯ ಮಗನಾದ ಅಜಾತಶತ್ರು ಹಿಂದುಗಳನ್ನೆಲ್ಲ ತನ್ನ ಪಕ್ಷಕ್ಕೆ ಸೇರಿಸಿಕೊಂಡು ರಾಜ್ಯವನ್ನು ತನಗೆ ಬಿಟ್ಟುಕೊಡಬೇಕೆಂದು ತಂದೆಯನ್ನು ಕೇಳುವನು. ಬುದ್ಧನ ಆದೇಶದಂತೆ ರಾಜನು ಸಂತೋಷದಿಂದ ಮಗನಿಗೆ ರಾಜ್ಯವನ್ನೊಪ್ಪಿಸಿ ತಾನು ತಪಸ್ಸುಮಾಡುವುದಕ್ಕಾಗಿ ಕಾಡಿಗೆ ಹೋಗುವನು. ರಾಣಿ ಒಮ್ಮೆ ಬುದ್ಧನ ಮೇಲಿನ ಭಕ್ತಿಯಿಂದಲೂ ಇನ್ನೊಮ್ಮೆ ಪತಿಪುತ್ರರನ್ನು ಅಗಲಿದ ದುಃಖದಿಂದಲೂ ಕೊರಗುವಳು. ಅಜಾತಶತ್ರು ಬೌದ್ಧಮತಾವಲಂಬಿಗಳನ್ನು ಕ್ರೂರ ಹಿಂಸೆಗೆ ಗುರಿಮಾಡುವನು.

ನಾಟಕಾರಂಭದಲ್ಲಿ ಬೌದ್ಧಭಿಕ್ಷುವೊಬ್ಬನು ರಾಜಧಾನಿಗೆ ಬಂದು ಶ್ರೀಮತಿಯನ್ನು ಆಶೀರ್ವದಿಸಿ, 'ಶೀಘ್ರದಲ್ಲಿ ಬುದ್ಧನು ನಿನ್ನನ್ನು ಕಾಣುವನು. ನೀನು ಅಮೂಲ್ಯವಾದ ಕಾಣಿಕೆಯನ್ನು ಆತನಿಗೆ ಅರ್ಪಿಸು' ಎನ್ನುವನು.

ಶ್ರೀಮತಿ, 'ಆತನು ಏನನ್ನು ಕೇಳಿದರೂ ಕೊಡಲು ಸಿದ್ಧಳಾಗಿರುವೆನು. ಆದ
ನಾನು ಕೊಡಬೇಕಾದ ಅಮೂಲ್ಯ ಕಾಣಿಕೆ ಯಾವುದೆಂದು ನನಗೆ ತಿಳಿಯದು
ಎಂದು ಹೇಳುವಳು.

ಹಿಂದೂಧರ್ಮಾಚಾರಗಳಿಗೂ ಬೌದ್ಧಮತವಿರಕ್ತಿ ಸ್ವೇಚ್ಛಾಭಾವಗಳಿಗೂ ಉಂಟಾದ ಅನ್ಯೋನ್ಯ ಘರ್ಷಣೆಯು ಈ ನಾಟಕದಲ್ಲಿ ಪ್ರಸ್ಫುಟವಾಗುವುದು. ಅಶೋಕ ವೃಕ್ಷದ ಅಡಿಯಲ್ಲಿ ಬುದ್ಧನ ಸಾಯಂಕಾಲದ ಪೂಜೆಯನ್ನು ಶ್ರೀಮತಿ ಸ್ವತಃ ಮಾಡಬೇಕೆಂದು ಬೌದ್ಧಸಂಘವು ಆಜ್ಞಾಪಿಸುವುದು. ಅಜಾತಶತ್ರು ಶ್ರೀಮತಿ ಪೂಜೆ ಮಾಡಲು ಸಾಧ್ಯವಿಲ್ಲವೆಂದೂ, ಮಾಡಿದರೆ ಮರಣದಂಡನೆ ವಿಧಿಸಲಾಗುವುದೆಂದೂ ಸಾರುವನು; ಮತ್ತು ಎಲ್ಲಿ ಪೂಜೆಮಾಡಬೇಕಾಗಿತ್ತೋ ಅದೇ ಸ್ಥಳದಲ್ಲಿ ಸಾಯಂಕಾಲ ನಾಟ್ಯವಾಡಬೇಕೆಂದು ಹೇಳುವನು. ಇದು ಬಹಳ ಅವಮಾನಕರವೆಂದು ಎಲ್ಲರೂ ಭಾವಿಸುವರು. ಏನು ಮಾಡಲೂ ತೋಚದೆ ಶ್ರೀಮತಿ ಬಾಧೆಪಡುತ್ತಿದ್ದಾಗ ಆಕೆಗೆ ಬುದ್ಧನ ಮಾತು ಕೇಳಿಸುವುದು. ಆತನಿಗೆ ಕೊಡಬೇಕಾದ ಕಾಣಿಕೆ ತನ್ನ ಸಂಗೀತನೃತ್ಯವೇ ಎಂದು ಆಕೆಗೆ ಸ್ಫುರಿಸುವುದು. ಮರುಕ್ಷಣದಲ್ಲಿ ಅಂದವಾಗಿ ಅಲಂಕರಿಸಿಕೊಂಡು, ಬಿಚ್ಚುಗತ್ತಿಯ ಭಟರನ್ನು ಲಕ್ಷಿಸದೆ ಅಶೋಕವೃಕ್ಷದ ಬಳಿಗೆ ಹೋಗುವಳು. ಆ ದಿನ ಅವಳ ನೃತ್ಯ ಗೀತಗಳು ಪರಮಾತ್ಮನ ಸೇವೆಯಾಗಿ ಮಾರ್ಪಡುವುದು. ನಾಟ್ಯವಾಡುತ್ತಾಡುತ್ತಾ ಆಕೆ ಆಭರಣಗಳನ್ನೆಲ್ಲ ಒಂದೊಂದಾಗಿ ತೆಗೆದು ಬುದ್ಧನಿಗೆ ಕಾಣಿಕೆಯಾಗಿ ಅರ್ಪಿಸುವಳು. ಕೊನೆಯಲ್ಲಿ ಸನ್ಯಾಸಿನಿಯಾಗಿ ಬುದ್ಧನ ಮುಂದೆ ಮೊಣಕಾಲೂರಿ ಧ್ಯಾನಮಾಡುವಳು. ಆ ಸಮಯದಲ್ಲಿ ರಾಜಭಟರು ಬಂದು ಆಕೆಯನ್ನು ವಧಿಸುವರು. ಆದರೆ ಆಕೆಯ ಭಕ್ತಿ ವಿಜಯಹೊಂದುವುದು. ಆಕೆಯನ್ನು ಕೊಲ್ಲಲು ಅಸೂಯೆಯಿಂದ ಕುತಂತ್ರವನ್ನು ಹೂಡಿದ ರಾಜಕುಮಾರಿಯರು ಪಶ್ಚಾತ್ತಾಪಹೊಂದಿ, ಆಕೆಯ ಆತ್ಮಸೌಂದರ್ಯವು ತಮ್ಮ ರಾಜ್ಞೀತ್ವಕ್ಕಿಂತ ಎಷ್ಟೋ ಉದಾತ್ತವಾದುದೆಂದು ಒಪ್ಪಿಕೊಳ್ಳುವರು. ಈ ತನಕ ದುಃಖಿನಿಯಾಗಿದ್ದ ರಾಣಿಗೆ ಈಗ ಶಾಂತಿಲಭಿಸುವುದು. ಆಕೆ ಬೌದ್ಧಮತವನ್ನು ಅಂಗೀಕರಿಸಿ ಭಿಕ್ಷುಣಿಯಾಗುವಳು.

ಈ ಎರಡು ನಾಟಕಗಳಲ್ಲಿಯೂ ಸಂಭಾಷಣೆಯು ಪ್ರಧಾನವಾಗಿದೆ. 1892ರಲ್ಲಿ ರಚಿಸಿದ 'ಚಿತ್ರಾಂಗದೆ'ಯಲ್ಲಿ ಸಂಗೀತನೃತ್ಯಗಳಿಗೆ ಪ್ರಾಮುಖ್ಯತೆ ಕೊಡಲಾಗಿದೆ. ಇದನ್ನು ಶಾಂತಿನಿಕೇತನದಲ್ಲಿ ಹೆಚ್ಚಾಗಿ ಪ್ರದರ್ಶಿಸುವರು. ಆಶ್ರಮದ ಪುಸ್ತಕಭಂಡಾರದ ಜಗಲಿಯೇ ರಂಗಸ್ಥಳ. ಪ್ರೇಕ್ಷಕರು ಹಚ್ಚನೆಯ ನೆಲದಲ್ಲಾಗಲಿ, ಜಮಖಾನೆಗಳಲ್ಲಾಗಲಿ ಕುಳಿತುಕೊಳ್ಳುವರು. ಸಂಗೀತಗಾರರು

ತಮ್ಮ ಸಂಗೀತೋಪಕರಣಗಳೊಂದಿಗೆ ರಂಗಸ್ಥಳದ ಒಂದು ಬದಿಯಲ್ಲಿ ಕುಳಿತು ಕೊಳ್ಳುವರು. ನೃತ್ಯದಲ್ಲಿ ಮದ್ದಳೆಬಾರಿಸುವವನು ಇನ್ನೊಂದು ಬದಿಯಲ್ಲಿ ಕುಳಿತುಕೊಳ್ಳುವನು. ರಂಗಸ್ಥಳದಲ್ಲಿ ದೀಪವನ್ನು ಹಚ್ಚಿ ನಾಟಕವನ್ನು ಪ್ರಾರಂಭಿಸುವರು. ನಾಟಕದಲ್ಲಿ ತೆರೆಯನ್ನೆತ್ತುವ ಮತ್ತು ಇಳಿಸುವ ಕಷ್ಟವೇ ಇರಲಿಲ್ಲ.

ರಂಗಸ್ಥಳದಲ್ಲಿ ದೃಶ್ಯಸೂಚಕವಾದ ಸಾಧನಗಳೇನೂ ಇಲ್ಲವಾದರೂ ಅದು ಅರಣ್ಯದೃಶ್ಯವೆಂದು ನಾವು ಊಹಿಸಿಕೊಳ್ಳಬಲ್ಲೆವು. ಬೇಡನೊಬ್ಬನು ಪ್ರವೇಶಿಸಿ ಹಾಡಿಗನುಗುಣವಾಗಿ ನಾಟ್ಯವನ್ನಾಡುವನು. ಪಕ್ಕದಲ್ಲಿ ಕುಳಿತವ ರಲ್ಲಿ ಕೆಲವರು ಹಾಡುವರು. ಇದರಿಂದ ನಮಗೆ ಮರಗಳು, ಪಕ್ಷಿಗಳು, ಸುಂದರ ದೃಶ್ಯಗಳು ಕಣ್ಣಮುಂದೆ ನಿಂತಂತಾಗುವುದು. ಇಷ್ಟರಿಂದ ಬೇಡನ ಪಾತ್ರಪ್ರಯೋಜನ ಪೂರ್ಣವಾಗುವುದು. ಆತನು ರಂಗಸ್ಥಳದಿಂದ ಹೊರಟು ಹೋಗುವನು. ತರುವಾಯ ಕಥಾನಾಯಕನಾದ ಅರ್ಜುನನ ಪ್ರವೇಶವಾಗು ವುದು. ಆತನು ಹನ್ನೆರಡು ವರ್ಷಗಳ ತಪವನ್ನಾಚರಿಸಲು ಇಲ್ಲಿಗೆ ಬರುವನು. ದೈವಧ್ಯಾನಾನಂತರ ರಂಗಸ್ಥಳದ ಒಂದು ಪಕ್ಕದಲ್ಲಿ ಮಲಗಿ ನಿದ್ರಿಸುವನು. ಬಳಿಕ ಬೇಡರ ವೇಷವನ್ನು ಧರಿಸಿದ ರಾಜಕುಮಾರಿ ಚಿತ್ರಾಂಗದೆಯೂ ಸಖಿಯರೂ ಪ್ರವೇಶಿಸುವರು. ಅವರ ವೇಷವು ವಿವಿಧ ಬಣ್ಣಗಳಿಂದ ಮನೋಹರವಾಗಿ ತೋರುವುದು. ಚಿತ್ರಾಂಗದೆ ತಂದೆಗೆ ಒಬ್ಬಳೇ ಮಗಳು. ಆತನು ಆಕೆಯನ್ನು ಪುತ್ರವಾತ್ಸಲ್ಯದಿಂದ ಕಾಣುತ್ತ ಎಲ್ಲ ವಿದ್ಯೆಗಳನ್ನು ಕಲಿಸುವನು. ಕಾಡಿನಲ್ಲಿ ವಿಹರಿಸುತ್ತಾ ಚಿತ್ರಾಂಗದೆಯೂ ಸಖಿಯರೂ ನಿದ್ರಿಸುತ್ತಿರುವ ಅರ್ಜುನನನ್ನು ಕಾಣುವರು; ಆತನನ್ನು ಏಳುವಂತೆ ಆಜ್ಞಾಪಿಸುವರು. ಇಲ್ಲಿವರೆಗೆ ಒಂದು ಮಾತೂ ಇಲ್ಲ. ಕತೆಯು ಕೇವಲ ಹಾಡುಗಳಿಂದಲೂ ಅಭಿನಯದಿಂದಲೂ ವ್ಯಕ್ತವಾಗುವುದು. ತನ್ನ ಮುಂದಿರುವ ವ್ಯಕ್ತಿ ಅರ್ಜುನನೆಂದು ತಿಳಿದಾಗ ಬೇಡರ ವೇಷದಲ್ಲಿದ್ದ ಚಿತ್ರಾಂಗದೆ ತನ್ನ ಜೀವನದಲ್ಲಿ ಮೊದಲ ಬಾರಿಗೆ ಸ್ತ್ರೀ ಸೌಂದರ್ಯಲಾವಣ್ಯಗಳನ್ನು ಆಕಾಂಕ್ಷಿಸುವಳು. ಕೂಡಲೇ ತನ್ನ ಸಖಿಯರ ಸಹಾಯದಿಂದ ನಿಜವೇಷವನ್ನು ಧರಿಸುವಳು. ಮರಳಿ ಅರ್ಜುನನು ಸಮಾಧಿ ಸ್ಥನಾದಾಗ ಆಕೆ ತನ್ನ ಸಹಜಾಲಂಕಾರಗಳಿಂದ ಶೋಭಿತಳಾಗಿ ಆತನ ಮುಂದೆ ಕಾಣಿಸಿಕೊಂಡು ಆತನ ಮನವೊಲಿಸಲು ಯತ್ನಿಸುವಳು. ಆದರೆ ಅರ್ಜುನನು ಆಕೆಯನ್ನು ನಿರಾಕರಿಸುವನು. ಅವಳು ಹತಾಶಳಾಗುವಳು.

ಬಳಿಕ ಚಿತ್ರಾಂಗದೆ ತನ್ನ ಸಖಿಯರೊಂದಿಗೆ ನಾಟ್ಯವಾಡುತ್ತಾ ತನ್ನ ಶಾರೀರಿಕ ಸೌಂದರ್ಯವನ್ನು ಹೆಚ್ಚಿಸುವ ಉಪಾಯವನ್ನು ಚಿಂತಿಸುವಳು. ಆಕೆ

ಕಾಮದೇವನನ್ನು ಸ್ತುತಿಸಿ, ಒಂದು ದಿನದ ಮಟ್ಟಿಗಾದರೂ ತನಗೆ ವಸಂತಶೋಭೆಯ ಸೌಂದರ್ಯವನ್ನು ದಯಪಾಲಿಸೆಂದು ಬೇಡುವಳು. ಮನ್ಮಥನು ಪ್ರತ್ಯಕ್ಷನಾಗಿ ಆಕೆಯ ಅಭೀಷ್ಟವನ್ನು ಸಲ್ಲಿಸುವನು. ಒಡನೆಯೇ ಚಿತ್ರಾಂಗದೆ ಸ್ಫುರದ್ರೂಪಿಣಿಯಾಗಿ ಕಾಣಿಸಿಕೊಳ್ಳುವಳು. ಸಖಿಯರೊಂದಿಗೆ ಅರ್ಜುನನ ಮುಂದೆ ನರ್ತಿಸಿ ಆತನನ್ನು ಸುಲಭವಾಗಿ ಆಕರ್ಷಿಸುವಳು. ಆದರೆ ಅಂತರಂಗದಲ್ಲಿ ಅರ್ಜುನನನ್ನು ಮೋಸಮಾಡಿದೆನೆಂದೂ ತನ್ನ ಈ ಸೌಂದರ್ಯವು ಕೇವಲ ಒಂದು ದಿನದ ಹೂವೆಂದೂ ಕೊರಗುವಳು.

ಅಡವಿಯಲ್ಲಿ ಚಿತ್ರಾಂಗದಾರ್ಜುನರು ಕೆಲವು ಕಾಲ ಸುಖವಾಗಿ ಕಳೆಯುವರು. ವನದೇವತೆಯರಂತೆ ನದಿಗಳಲ್ಲಿ ಕ್ರೀಡಿಸುತ್ತಾ, ವನದಲ್ಲಿ ವಿಹರಿಸುತ್ತಾ ವನ್ಯಪುಷ್ಪಗಳಿಂದ ಚಿತ್ರಾಂಗದೆಯನ್ನು ಅಲಂಕರಿಸುತ್ತಾ ಸಖಿಯರು ದಿನಗಳೆಯುವರು. ಆದರೆ ಈ ಆನಂದಕಾಲದಲ್ಲಿ ಚಿತ್ರಾಂಗದೆ ತನ್ನ ಅಸ್ಥಿರ ಸೌಂದರ್ಯವನ್ನು ನೆನೆದು ಕೊರಗುವಳು. ಕಡೆಯಲ್ಲಿ, ನೆರೆಯ ಹಳ್ಳಿಗರು ಚಿತ್ರಾಂಗದೆಯನ್ನು ಕುರಿತು—ಆಕೆ ವೀರಾವೇಶದಿಂದ ಹೋರಾಡುತಿದ್ದಳೆಂದೂ ಕಳ್ಳರಿಂದ, ದರೋಡೆಖೋರರಿಂದ ತಮ್ಮನ್ನು ರಕ್ಷಿಸುತಿದ್ದಳೆಂದೂ, ಈಗ ಕೆಲವು ದಿನಗಳಿಂದ ಆಕೆಯ ಪತ್ತೆಯೇ ಇಲ್ಲವೆಂದೂ—ಆಡಿಕೊಳ್ಳುವುದನ್ನು ಅರ್ಜುನನು ಕೇಳುವನು. ಆಕೆಯ ಶೌರ್ಯಸಾಹಸಗಳನ್ನು ಕೇಳಿ ಅರ್ಜುನನ ಭಾವೋದ್ರೇಕವಾಗುವುದು. ಅವನು ಚಿತ್ರಾಂಗದೆಯಲ್ಲಿ ಈ ಅದ್ಭುತ ರಾಜಕುಮಾರಿಯ ಕುರಿತು ಪ್ರಶ್ನಿಸುವನು. ಅವಳು ಸೌಂದರ್ಯಹೀನಳೆಂದು ಚಿತ್ರಾಂಗದೆ ಹೇಳುವಳು. ಆದರೆ ಅರ್ಜುನನು ಸೌಂದರ್ಯವನ್ನು ಲಕ್ಷಿಸುವವನಲ್ಲ. ಇದನ್ನರಿತ ಚಿತ್ರಾಂಗದೆ ತನ್ನ ನಿಜವೃತ್ತಾಂತವನ್ನು ಅರ್ಜುನನಿಗೆ ತಿಳಿಸುವಳು. ಕೊನೆಯಲ್ಲಿ, ಕೃತಕಾಲಂಕಾರವಿಲ್ಲದ ಆತ್ಮಸೌಂದರ್ಯವೂ, ಆತ್ಮವಂಚನೆಗೊಳಗಾಗದ ಸತ್ಯವೂ ವಿಜಯಿಯಾಗುವುದನ್ನು ಕಾಣುವೆವು.

## ಅಧ್ಯಾಯ ೧೪.

# ವಿಶ್ವಕುಟುಂಬಿ ರವೀಂದ್ರ

**1920**ರಿಂದ ಮೊದಲ್ಗೊಂಡು ರವೀಂದ್ರನು ಸ್ವದೇಶವಿದೇಶಗಳನ್ನೆಲ್ಲ ಸಂಚರಿಸಿದನು. ಆಗಲೇ ಆತನಿಗೆ ಷಷ್ಟ್ಯಬ್ದ ಪೂರ್ಣವಾಗಿತ್ತು. ಬೇರೆಯಾರಾದರೂ ಆಗಿದ್ದರೆ ಆ ವಯಸ್ಸಿನಲ್ಲಿ ವಿಶ್ರಾಂತಿಹೊಂದುತಿದ್ದರು.. ಆದರೆ ರವೀಂದ್ರನು

ದೇಹದಲ್ಲಿ ಶಕ್ತಿಯಿರುವಷ್ಟು ಕಾಲ ಕೆಲಸಮಾಡದೆ ವಿಶ್ರಾಂತಿ ತೆಗೆದುಕೊಳ್ಳುವವನಲ್ಲ. ಈ ಪ್ರಯಾಣಗಳಿಂದಲಾಗಿ ಆತನು ಬಹಳ ಬಳಲಿದನು. ಆತನು ಹೋದಲ್ಲೆಲ್ಲ ಜನಸಮೂಹವು ನೆರೆದು ಅಲ್ಲಲ್ಲಿ ಭಾಷಣಗಳೂ ಗೌರವಾತಿಥ್ಯಗಳೂ ನಡೆದುವು. ಇದರಿಂದ ರವೀಂದ್ರನು ಪರಮಾನಂದಗೊಂಡನು.

ಆದರೆ ಇಂಗ್ಲೆಂಡ್ ಅಮೆರಿಕಾದೇಶಗಳಲ್ಲಿ ಕೆಲವು ಪತ್ರಿಕೆಗಳು ಸ್ಪರ್ಧೆ ವಹಿಸಿ ಆತನಿಗೆ ವ್ಯತಿರೇಕವಾಗಿ ಬರೆಯುತ್ತಿದ್ದುವು. ರವೀಂದ್ರನು ಇದರಿಂದ ಖೇದಗೊಂಡು ಇನ್ನು ಮುಂದೆ ಶಾಂತಿನಿಕೇತನದಲ್ಲೇ ಸ್ಥಿರವಾಗಿ ನೆಲಸಬೇಕೆಂದೂ ತಾನೊಬ್ಬ ಗಣ್ಯವ್ಯಕ್ತಿಯೆಂಬುದನ್ನು ಮರೆತುಬಿಡಬೇಕೆಂದೂ ನಿಶ್ಚೈಸಿದನು.

ಆದರೂ ವಿಶ್ವಭಾರತಿಗಾಗಿ ಆತನು ಪರ್ಯಟನಮಾಡುವುದು ತಪ್ಪಲಿಲ್ಲ. ವಿಶ್ವಭಾರತಿಯು ಪ್ರಪಂಚಕ್ಕೆಲ್ಲ ತಿಳಿದಿರಬೇಕೆಂಬುದು ಆತನ ಮಹದಾಶೆ. ವಿದೇಶ ವಿಜ್ಞಾನಿಗಳ ಪರಿಚಯವನ್ನು ಸಂಪಾದಿಸಿ, ವಿಶ್ವಭಾರತಿಗಾಗಿ ಅವರ ಸಹಾಯ ಸಲಹೆಗಳನ್ನು ಕೋರಿದನು. ಅಷ್ಟೇ ಅಲ್ಲದೆ ವಿಶ್ವಭಾರತಿಗೆ ಬೇಕಾದ ಧನ ಸಂಗ್ರಹಕಾರ್ಯವನ್ನೂ ಮಾಡಬೇಕಾಗಿತ್ತು. ಆದುದರಿಂದ 1920 ರಿಂದ 1936ರ ತನಕ ಆತನು ಸಂಚಾರ ಮಾಡುತ್ತಲೇ ಇದ್ದನು. (ವಿವರವನ್ನು ಕೆಳಗೆ ಕೊಡಲಾಗಿದೆ). 1931ರಲ್ಲಿ ಮಾತ್ರ ಬಂಗಾಳವನ್ನು ಬಿಟ್ಟು ಹೊರಗೆ ಹೋಗಿರಲಿಲ್ಲ.

1920ರಲ್ಲಿ ಪಶ್ಚಿಮ ಹಿಂದೂದೇಶವನ್ನೆಲ್ಲ ಸುತ್ತಾಡಿದ ಮೇಲೆ ಯುರೋಪ್ ಅಮೆರಿಕಾಗಳಿಗೆ ಪ್ರಯಾಣಬೆಳಸಿದನು. 1922ರಲ್ಲಿ ದಕ್ಷಿಣ ಹಿಂದೂದೇಶವನ್ನು ಸಂಚರಿಸಿ ಬಳಿಕ ಸಿಲೋನಿಗೆ ತೆರಳಿದನು. 1923ರಲ್ಲಿ ಸಿಂಧೂ ಪ್ರಾಂತ, ಕಾಥಿಯವಾರ್, ಅಸ್ಸಾಮ್‌ಗಳಲ್ಲಿ ಸಂಚರಿಸಿದನು. 1924ರಲ್ಲಿ ಚೀನ, ಜಪಾನ್, ದಕ್ಷಿಣ ಅಮೆರಿಕಾಗಳಿಗೆ ಹೋಗಿ ಮರಳುವಾಗ ಇಟಲಿಗೂ ಸಂದರ್ಶನವಿತ್ತನು. 1926ರಲ್ಲಿ ಸ್ವಿಜರ್‌ಲಾಂಡ್, ನಾರ್ವೆ, ಡೆನ್ಮಾರ್ಕ್, ಜರ್ಮನಿ, ಜೆಕೊಸ್ಲೊವಾಕಿಯ, ಗ್ರೀಸ್, ಈಜಿಪ್ಟ್‌ಗಳನ್ನು ಸುತ್ತಾಡಿದನು. 1927ರಲ್ಲಿ ಸಂಯುಕ್ತರಾಷ್ಟ್ರ, ಮಧ್ಯರಾಷ್ಟ್ರಗಳಿಗೆ ಹೋಗಿ, ಬಳಿಕ ಮಲಯಾ, ತಾಯ್-ಲಾಂಡ್‌ಗಳಿಗೆ ಆಗಮಿಸಿದನು. 1928ರಲ್ಲಿ ಇನ್ನೊಮ್ಮೆ ದಕ್ಷಿಣ ಹಿಂದೂದೇಶ ಮತ್ತು ಸಿಲೋನ್‌ಗಳನ್ನು ಸಂಚರಿಸಿದನು. 1929ರಲ್ಲಿ ಕೆನಡಾಕ್ಕೆ ಪ್ರಯಾಣ ಬೆಳೆಸಿ ಬಳಿಕ ಜಪಾನ್ ಇಂಡೊಚೈನಾಗಳನ್ನು ಸಂಚರಿಸಿದನು. 1930ರಲ್ಲಿ ಬರೋಡಾಕ್ಕೆ ಹೋದನು. ಅದೇ ವರ್ಷಾಂತ್ಯದಲ್ಲಿ ಮತ್ತೊಮ್ಮೆ ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ, ಡೆನ್ಮಾರ್ಕ್, ರಷ್ಯಾ, ಅಮೆರಿಕಾದೇಶಗಳನ್ನು ಸಂಚರಿಸಿದನು. 1932ರಲ್ಲಿ ಪರ್ಷಿಯಾ, ಇರಾಕ್‌ಗಳಿಗೆ ಪ್ರಯಾಣಮಾಡಿದನು.

1933ರಿಂದ 1936ರ ವರೆಗೆ ರವೀಂದ್ರನು ಭಾರತದಲ್ಲೇ ಅನೇಕ ಸ್ಥಳಗಳನ್ನು ಸಂದರ್ಶಿಸಿದನು. ಶಾಂತಿನಿಕೇತನದಿಂದ ಕೆಲವರನ್ನು ತನ್ನೊಂದಿಗೆ ಕರೆದುಕೊಂಡು ಬೊಂಬಾಯಿ, ಆಂಧ್ರ, ಮದ್ರಾಸ್, ಪಂಜಾಬ್, ಬಿಹಾರ್, ಸಿಲೋನುಗಳಲ್ಲಿ ತನ್ನ ನಾಟಕಗಳನ್ನು ಪ್ರದರ್ಶಿಸಿ ವಿಶ್ವಭಾರತಿಗಾಗಿ ಧನ ಸಂಗ್ರಹ ಮಾಡಿದನು. ಆಗ ಆತನು ಎಪ್ಪತ್ತೈದು ವರ್ಷದ ಹಣ್ಣುಮುದುಕನಾಗಿದ್ದನು. 1936ರಲ್ಲಿ ಮಹಾತ್ಮಾಗಾಂಧಿಯವರು ಢಿಲ್ಲಿಯಲ್ಲಿ ರವೀಂದ್ರನನ್ನು ಭೇಟಿಯಾದರು. ಈ ಅಪರ ವಯಸ್ಸಿನಲ್ಲಿ ರವೀಂದ್ರನು ಈ ರೀತಿಯಲ್ಲಿ ತನ್ನ ಸಂಸ್ಥೆಗೆ ಧನಸಂಗ್ರಹಮಾಡುವುದಕ್ಕಾಗಿ ಪಾಡುಪಡುವುದನ್ನು ಕಂಡು ಗಾಂಧಿಜೀಯವರು ಬಹಳ ಸಂಕಟಪಟ್ಟರು. ಓರ್ವ 'ಅಜ್ಞಾತ ಮಿತ್ರನನ್ನು' ವಿಶ್ವಭಾರತಿ ಕಾರ್ಯಕ್ರಮವು ಚೆನ್ನಾಗಿ ನೆರವೇರುವುದಕ್ಕಾಗಿಯೂ ರವೀಂದ್ರನು ನಿಶ್ಚಿಂತೆಯಿಂದ ಇರುವಂತೆ ಮಾಡುವುದಕ್ಕಾಗಿಯೂ ರೂ. 60,000ಗಳನ್ನು ದಾನ ಮಾಡುವಂತೆ ಪ್ರೋತ್ಸಾಹಿಸಿದರು. ಅಂದಿನಿಂದ ರವೀಂದ್ರನು ಧನ ಸಂಗ್ರಹಕ್ಕಾಗಿ ಸಂಚರಿಸುವುದನ್ನು ನಿಲ್ಲಿಸಿದನು. 1939ರಲ್ಲಿ ಒರಿಸ್ಸಾ ಸರಕಾರವು ರವೀಂದ್ರನನ್ನು ಗೌರವಿಸಿತು. ದೂರ ದೇಶಗಳ ಸಂಚಾರಗಳಲ್ಲದೆ ಬಂಗಾಳದಲ್ಲಿಯೂ ಹಲವು ಬಾರಿ ಪರ್ಯಟನವೆಸಗಿದನು.

1920ರಲ್ಲಿ ಇಂಗ್ಲೆಂಡಿಗೆ ಹೋಗಿದ್ದಾಗ ಅಲ್ಲಿನ ಸ್ಥಿತಿಗತಿಗಳು ಆತನಿಗೆ ರುಚಿಸಲಿಲ್ಲ. ಅದು ಅಮೃತಸರದ ಕ್ರೂರ ಹತ್ಯಾಕಾಂಡವು ಜರಗಿದ ಕಾಲವಾಗಿತ್ತು. ಅನೇಕ ಕಡೆಗಳಲ್ಲಿ ಜನರು ಆತನ ಮೇಲೆ ದ್ವೇಷಾಸೂಯೆಗಳನ್ನು ಕಾರಿದರು. ಪಾರ್ಲಿಮೆಂಟಿನಲ್ಲಿ ಹಿಂದೂದೇಶದ ಪರಿಸ್ಥಿತಿಯ ಕುರಿತೂ ಜನರಲ್ ಡಯ್ಯರ್‌ನ ಚರ್ಯೆಯ ಕುರಿತೂ ಚರ್ಚೆ ನಡೆಯುತಿತ್ತು. ರವೀಂದ್ರನು ಕೆಲವು ಸಭೆಗಳಿಗೆ ಹೋಗಿ ಅಲ್ಲಿ ನಡೆಯುತಿದ್ದ ಚರ್ಚೆಗಳನ್ನು ಕೇಳಿದನು. ಇಂಗ್ಲೆಂಡ್ ತನ್ನ ವ್ಯಾಪಾರದಲ್ಲಿಯೂ ಲಾಭದಲ್ಲಿಯೂ ದೃಷ್ಟಿಯಿಟ್ಟಿತ್ತಲ್ಲದೆ ಭಾರತೀಯರ ಕೋರಿಕೆಗಳನ್ನು ಗಮನಿಸುವ ಸ್ಥಿತಿಯಲ್ಲಿಲ್ಲವೆಂಬುದನ್ನು ಕಂಡುಕೊಂಡನು. ಬ್ರಿಟಿಷರನ್ನು ನಮ್ಮ ಹಕ್ಕುಗಳಿಗಾಗಿ ಯಾಚಿಸುವುದರಿಂದ ಲಾಭವಿಲ್ಲವೆಂದೂ, ಇದಕ್ಕಿಂತ ಹಿಂದೂ ಸಂಘಟನೆಗಾಗಿ ಪಾಡುಪಡುವುದು ಅಗತ್ಯವೆಂದೂ, ಹಾಗೆ ಮಾಡಿದಲ್ಲಿ ಯಾರಿಗೂ ತಲೆಬಾಗಬೇಕಾಗಿಲ್ಲವೆಂದೂ ಆತನು ಮಿತ್ರರಿಗೆ ಪತ್ರಬರೆದನು.

ರವೀಂದ್ರನು ಅಮೃತಸರದಲ್ಲಿ ನಡೆದ ಕ್ರೂರಕೃತ್ಯವನ್ನು ವಿರೋಧಿಸಿದುದನ್ನೂ ಯುದ್ಧವನ್ನು ಬಹಿಷ್ಕರಿಸಿದುದನ್ನೂ ಆಂಗ್ಲೇಯರು ವಿರೋಧಿಸಿದರು. 1920ರಲ್ಲಿ ರವೀಂದ್ರನು ಫ್ರಾನ್ಸಿಗೆ ಹೋದಾಗ ಅಲ್ಲಿ 1914—1919ರ

ಯುದ್ಧದಿಂದಾದ ಅನಾಹುತಗಳನ್ನು ಕಣ್ಣಾರೆ ಕಂಡನು. ನಾಲ್ಕು ವರ್ಷಗಳ ಭಯಂಕರ ಯುದ್ಧದಿಂದ ನಾಶವಾದ ಹಳ್ಳಿಗಳನ್ನೂ ಹೊಲಗಳನ್ನೂ ಯುದ್ಧದಲ್ಲಿ ಮರಣಹೊಂದಿದ ಅಸಂಖ್ಯಾತ ಯುವಕರ ಸಮಾಧಿಗಳನ್ನೂ ಕಂಡನು. ಯುದ್ಧವು ಮಾನವ ರಕ್ತಾಕಾಂಕ್ಷಿಯಾದ ಭಯಂಕರ ರಾಕ್ಷಸನೆಂಬುದನ್ನು ಮನಗಂಡನು. ಯುದ್ಧದಲ್ಲಿ ಅನ್ಯಾಯವಾಗಿ ಗತಿಸಿದ ಯುವಕರ ಸಾಹಸ ತ್ಯಾಗಗಳನ್ನು ಕಂಡು ಬೆರಗಾದನು. ಆದರೆ ಅವರ ಜೀವನ ಈ ರೀತಿ ವ್ಯರ್ಥವಾದುದಕ್ಕಾಗಿ ಖೇದಗೊಂಡನು. ಯುದ್ಧದಿಂದ ನಿಜವಾದ ನ್ಯಾಯವೂ ಸ್ವಾತಂತ್ರ್ಯವೂ ಲಭಿಸದೆಂದು ಆತನು ನಂಬಿದನು. ಫ್ರಾನ್ಸಿನಿಂದ ರವೀಂದ್ರನು ಜರ್ಮನಿಗೆ ಹೋದನು. ಜರ್ಮನಿಯು ಯುದ್ಧದಲ್ಲಿ ಸೋತ ರಾಷ್ಟ್ರವಾದುದ ರಿಂದ ಭಯಂಕರ ಕ್ಷಾಮ, ಬಡತನ, ಹಸಿವೆಗಳಿಂದ ನರಳುತಿತ್ತು. ಗೆದ್ದ ರಾಷ್ಟ್ರಗಳು ಹೊರಿಸಿದ ತೆರಿಗೆಗಳನ್ನು ತೆರಲು ಅಸಮರ್ಥವಾಗಿತ್ತು. ಈ ಪರಿ ಸ್ಥಿತಿಯಲ್ಲಿ ಯಾವ ರಾಷ್ಟ್ರವೂ ಜರ್ಮನಿಯ ಸಹಾಯಕ್ಕಾಗಲಿ, ಸ್ನೇಹವನ್ನು ಸಂಪಾದಿಸುವುದಕ್ಕಾಗಲಿ ಇಷ್ಟಪಡಲಿಲ್ಲ. ನಿರಪರಾಧಿಗಳಾದ ಸಾಮಾನ್ಯ ಪ್ರಜೆಗಳ ಮತ್ತು ಮಕ್ಕಳ ಸಂಕಷ್ಟಗಳನ್ನು ಕಂಡು ಖೇದಗೊಂಡನು. ಈ ಪರಿಸ್ಥಿತಿಯಲ್ಲಿದ್ದ ಜರ್ಮನಿಯನ್ನು ಸಹಾನುಭೂತಿಯಿಂದ ಕಾಣಬೇಕೆಂದು ಹೇಳಿ ದನು. ಯುದ್ಧದಿಂದುಂಟಾದ ಅನರ್ಥವನ್ನು, ದಯೆ, ಕ್ಷಮೆ, ಇವೆರಡೇ ತೊಲಗಿಸಬಲ್ಲವೆಂದು ಅರಿತನು. ಆದರೆ ಜರ್ಮನಿಯೇ ಯುದ್ಧಕ್ಕೆ ಮೂಲಕಾ ರಣವೆಂದು ಆರೋಪಿಸಿ ಫ್ರಾನ್ಸ್ ಬ್ರಿಟನುಗಳು ಆ ದೇಶವನ್ನು ಕ್ಷಮಿಸುವುದ ಕ್ಕಾಗಲಿ, ಅವರಿಗೆ ಸಹಾಯವನ್ನು ನೀಡುವುದಕ್ಕಾಗಲಿ ಇಷ್ಟಪಡಲಿಲ್ಲ. ಅಂದು ಜರ್ಮನಿಗೆ ಸಹಾಯಮಾಡಿದ್ದರೆ ಅಲ್ಲಿ ನಾಜೀ ಪ್ರಭುತ್ವವು ಸಂಘಟಿತವಾಗುತ್ತಿರ ಲಿಲ್ಲ; ಇನ್ನೊಂದು ಯುದ್ಧವು ಸಂಭವಿಸುತ್ತಿರಲಿಲ್ಲ. ರವೀಂದ್ರನ ಹಾಗೂ ಇತರ ಮೇಧಾವಿಗಳ ಹಿತವಚನವು ನಿಷ್ಪ್ರಯೋಜನವಾಯಿತು.

ರವೀಂದ್ರನು ಜರ್ಮನಿಯಲ್ಲಿದ್ದಾಗ ಇಬ್ಬರು ಬಾಲಿಕೆಯರು ಹೂಗಳನ್ನು ಹಿಡಿದುಕೊಂಡು ಆತನನ್ನು ನೋಡಲು ಬಂದರು. ಅವರಿಗೆ ಇಂಗ್ಲಿಷ್ ಚೆನ್ನಾಗಿ ಬರುತ್ತಿರಲಿಲ್ಲ. ರವೀಂದ್ರನಿಗೆ ಜರ್ಮನ್ ಭಾಷೆ ತಿಳಿದಿರಲಿಲ್ಲ. ಅವರಲ್ಲೊಬ್ಬಳು 'ನಾನು ಭಾರತವನ್ನು ಪ್ರೀತಿಸುತ್ತೇನೆ' ಎಂದಳು. ರವೀಂದ್ರನು 'ಏತಕ್ಕಾಗಿ' ಎಂದು ಕೇಳಿದಾಗ 'ನೀವು ಭಗವಂತನನ್ನು ಪ್ರೀತಿಸು ವುದರಿಂದ' ಎಂದು ಆ ಬಾಲಿಕೆ ಉತ್ತರವಿತ್ತಳು. ರವೀಂದ್ರನು ಆಕೆಯ ಮಾತುಗಳನ್ನು ಕೇಳಿ ಮುಗ್ಧನಾದನು. ಮುಂದೆ ಈ ವಿಷಯವನ್ನು ಕುರಿತು ಪ್ರಸ್ತಾಪಿಸುತ್ತಾ ರವೀಂದ್ರನು 'ಈ ಪ್ರಶಂಸೆ ಅಮೋಘವಾದುದು. ಈ ಮಾತು

ಸತ್ಯವಾಗಲೆಂದು ಆಶಿಸುವೆನು. ದೇಶಪ್ರೇಮಕ್ಕಿಂತಲೂ ಭಗವಂತನ ಪ್ರೇಮವ ಅಧಿಕವಾಗಿರುವ ರಾಷ್ಟ್ರವನ್ನೇ ಪ್ರಪಂಚವು ಹಾರೈಸುತ್ತಿದೆ' ಎಂದನು.

1924ರಲ್ಲಿ ಚೀನಾಕ್ಕೆ ಹೋಗಿದ್ದಾಗ ರವೀಂದ್ರನಿಗೆ ಆರಂಭದಲ್ಲ ಹೆಚ್ಚಿನ ಸತ್ಕಾರವು ಲಭಿಸಲಿಲ್ಲ. ಬಹಳ ಮಂದಿ ಚೀನೀ ಯುವಕರು ಅಮೆ ರಿಕಾ ಇಂಗ್ಲೆಂಡುಗಳಲ್ಲಿ ಕಲಿತು ಬಂದಿದ್ದರು. ಪಾಶ್ಚಾತ್ಯ ವೈಜ್ಞಾನಿಕ ತಿಳುವಳಿಕೆಯನ್ನು ತಮ್ಮ ದೇಶದ ಪ್ರಯೋಜನಕ್ಕಾಗಿ ಬಳಸಲು ಆತುರರಾ ಗಿದ್ದರು. ಅವರಲ್ಲಿ ಹಲವರು ಸಮತಾವಾದಿಗಳಾಗಿದ್ದು ಬಲಾತ್ಕಾರದಿಂದ ಲಾದರೂ ತಮ್ಮ ಯೋಜನೆಗಳನ್ನು ಪೂರೈಸಲು ಸಿದ್ಧರಾಗಿದ್ದರು. ಅವರು ರವೀಂದ್ರನು ಪ್ರಾಚೀನಪದ್ಧತಿಗಳನ್ನು ಆದರಿಸುವವನೆಂದೂ ಪಾಶ್ಚಾತ್ಯ ಪದ್ಧತಿ ಗಳನ್ನು ಮೆಚ್ಚದವನೆಂದೂ ಪತ್ರಿಕೆಗಳಲ್ಲಿ ಓದಿದ್ದರು. ಇದರಿಂದಾಗಿ ಅವರು ರವೀಂದ್ರನನ್ನು ಅಸೂಯೆಯಿಂದ ಕಂಡರು. ಆದರೆ ರವೀಂದ್ರನ ಉಪನ್ಯಾಸ ಗಳನ್ನು ಕೇಳಿದ ಮೇಲೆ ತಾವು ಹಿಂದೆ ಕೇಳಿದುದೂ ಓದಿದುದೂ ಸತ್ಯವಲ್ಲ ವೆಂದು ತಿಳಿದುಕೊಂಡರು. ರವೀಂದ್ರನು ಸತ್ಯಾನ್ವೇಷಿಯೆಂದೂ ಎಲ್ಲಾ ಕಡೆಗಳಲ್ಲಿಯೂ ಸತ್ಯಜ್ಞಾನಗಳಿಗಾಗಿ ಹುಡುಕುತ್ತಿರುವನೆಂದೂ ಅರಿತರು. ಅನಂತರ ಬಹಳ ಮಂದಿ ಯುವಕರು ರವೀಂದ್ರನ ಮಿತ್ರರಾದರು. ಚೀನೀ ವಿದ್ವಾಂಸರಾದ ಡಾ. ಹುಷಿ, ಡಾ. ಲಿಯಾನ್ ಚಿಚಾವೋ, ಎಂಬವರು ರವೀಂದ್ರನಿಗೆ ತುಂಬ ಸಹಾಯವನ್ನೆಸಗಿದರು. ಅಂದಿನಿಂದ ಚೀನದ ಎಷ್ಟೋ ವಿದ್ಯಾರ್ಥಿಗಳೂ ಸಂದರ್ಶಕರೂ ಶಾಂತಿನಿಕೇತನಕ್ಕೆ ಬಂದು ಸೇರಿದರು.

1926ರಲ್ಲಿ ರವೀಂದ್ರನು ಇಟಲಿಗೆ ಸಂದರ್ಶನವಿತ್ತಾಗ, ಅಲ್ಲಿಯ ಸರ ಕಾರವು ಆತನನ್ನು ಗೌರವದಿಂದ ಸತ್ಕರಿಸಿತು. ಅಲ್ಲಿನ ಘನ ವಿದ್ವಾಂಸರು ಅವನನ್ನು ಭೇಟಿಯಾದರು. ಇಟಲಿಯ ರಾಜನು ಬಹಳ ಯೋಗ್ಯನೆಂದೂ ಸ್ನೇಹಪಾತ್ರನೆಂದೂ ತಿಳಿದು ಅವನ ಮೈತ್ರಿಯನ್ನು ಸಂಪಾದಿಸಿದನು. ಆತನು ಮುಸ್ಸೋಲಿನಿಯನ್ನು ಸಂಧಿಸಿದಾಗ, ತಾನು ಇಟಲಿ ಭಾಷೆಗೆ ಭಾಷಾಂತರ ಗೊಂಡ ರವೀಂದ್ರನ ಕೃತಿಗಳನ್ನೆಲ್ಲ ಓದಿ ಆಶ್ಚರ್ಯಗೊಂಡಿರುವೆನೆಂದನು. ಪ್ರಸಿದ್ಧ ಮೇಧಾವಿಯೂ ಬರೆಹಗಾರನೂ ಆದ ಬೆನಿಡೇಟೊ ಕ್ರೋಸ್‌ನ್ನು ಭೇಟಿಯಾದನು. ಇಟಲಿಯ ಮಕ್ಕಳೊಡನೆ ಕಲೆತು ಬಹಳ ವಿನೋದ ಗೊಂಡನು. ರವೀಂದ್ರನು ರೋಮ್‌ನಗರದಲ್ಲಿದ್ದಾಗ ಶಾಲಾಮಕ್ಕಳ ವಾರ್ಷಿಕೋತ್ಸವ ನಡೆಯಿತು. ಸಾವಿರ ಮಕ್ಕಳು ಒಂದಾಗಿ ಹಾಡಿದರು. ಅವರ ಸಂಗೀತವು ಆಶ್ಚರ್ಯಕರವಾಗಿತ್ತು. ತರುವಾಯ ಕೆಲವು ಮಂದಿ ಮಕ್ಕಳು ತಮ್ಮ ಪ್ರಬಂಧ ಪುಸ್ತಕಗಳನ್ನು ರವೀಂದ್ರನಿಗೆ ತೋರಿಸಿದರು. ಅವ

ಗಳಲ್ಲಿ ರವೀಂದ್ರನ ಕುರಿತಾದ ಪ್ರಬಂಧಗಳೂ ಆತನ ಚಿತ್ರಗಳೂ ಇದ್ದುವು. ರವೀಂದ್ರನು ಆ ಪುಸ್ತಕಗಳನ್ನು ಆಜೀವಪರ್ಯಂತ ಜೋಪಾನವಾಗಿಟ್ಟನು.

ಆಗಲೇ ಇಟಲಿಯಲ್ಲಿ 'ಫಾಸಿಸ್ಟ್' ಪಕ್ಷವು ಅಧಿಕಾರದಲ್ಲಿತ್ತು. ಕೆಲವು ಮಂದಿ ಪತ್ರಿಕೋದ್ಯಮಿಗಳು 'ಫಾಸಿಸಮ್'ನ ಕುರಿತು ರವೀಂದ್ರನ ಅಭಿಪ್ರಾಯವೇನೆಂದು ಕೇಳಿದರು. ರವೀಂದ್ರನಿಗೆ ಇಟಲಿಭಾಷೆ ಬಾರದುದರಿಂದ ಜಾಗ್ರತೆಯಾಗಿಯೇ ಉತ್ತರವಿತ್ತನು. 'ನನಗೆ ಇಟಲಿಯ ಪ್ರಜೆಗಳ ಹಾಗೂ ಪ್ರಭುತ್ವದ ವಿಷಯ ವಿಶೇಷ ಪರಿಜ್ಞಾನವಿಲ್ಲ. ಆದುದರಿಂದ ಈ ಕುರಿತು ಏನು ಹೇಳುವುದಕ್ಕೂ ನಾನು ಅಸಮರ್ಥನಾಗಿದ್ದೇನೆ. ಆದರೂ ಭೌತಿಕ ಸಂಪತ್ತಿಗಿಂತ ಆತ್ಮ ಸಂಪತ್ತೇ ಶ್ರೇಷ್ಠವೆಂದೂ ಆತ್ಮಶಕ್ತಿ ಅಧಿಕವಾಗಿರುವ ದೇಶವೇ ಎಲ್ಲಾ ರಾಷ್ಟ್ರಗಳಿಗಿಂತ ಬಲವತ್ತರವಾದುದೆಂದೂ ಹೇಳಬಲ್ಲೆನು' ಎಂದನು. ಇಟಲಿಯಿಂದ ಸ್ವಿಜರ್‌ಲಾಂಡಿಗೆ ಹೋಗಿ ಅಲ್ಲಿ ಇಟಲಿ ಭಾಷೆಯನ್ನಾಡುವ ಸ್ನೇಹಿತರೊಂದಿಗೆ ತಂಗಿದನು. ಇಟಲಿಯ ಕೆಲವು ಪತ್ರಿಕೆಗಳು, ರವೀಂದ್ರನು ಫಾಸಿಸ್ಟ್ ಪ್ರಭುತ್ವವನ್ನು ಮೆಚ್ಚಿರುವನೆಂದು ಬರೆದಿರುವುದನ್ನು ಅವರು ರವೀಂದ್ರನಿಗೆ ತಿಳಿಸಿದರು. ಮಾತ್ರವಲ್ಲದೆ ಫಾಸಿಸ್ಟರ ಅನ್ಯಾಯಗಳನ್ನೂ ಕ್ರೂರಕೃತ್ಯಗಳನ್ನೂ ವರ್ಣಿಸಿದರು. ರವೀಂದ್ರನು ಇಟಲಿಯ ಪತ್ರಿಕೆಗಳು ಪ್ರಕಟಿಸಿದ ಸುಳ್ಳುವಾರ್ತೆಗಳನ್ನು ಕೇಳಿ ಕುಪಿತನಾದನು. ಕೂಡಲೇ 'ಮಾಂಚೆಸ್ಟರ್ ಗಾರ್ಡಿಯನ್' ಎಂಬ ಪ್ರಖ್ಯಾತ ಆಂಗ್ಲಪತ್ರಿಕೆಗೆ ಪತ್ರಬರೆದನು. ಪತ್ರದಲ್ಲಿ ತಾನು ಇಟಲಿಯ ಪತ್ರಿಕೋದ್ಯಮಿಗಳ ಮುಂದೆ ಏನನ್ನು ಹೇಳಿದೆನೆಂಬುದನ್ನು ಬರೆದು ಫಾಸಿಸ್ಟರ ವರ್ತನೆಯನ್ನು ಖಂಡಿಸಿದ್ದಲ್ಲದೆ ತಾನು ಎಂದೆಂದೂ ಅನ್ಯಾಯಗಳಿಗೆ, ಅತ್ಯಾಚಾರಗಳಿಗೆ ವಿರೋಧಿಯೇ! ಎಂದೂ ಸಾರಿದನು. ಈ ಪತ್ರದಿಂದ ಇಟಲಿಯ ಪತ್ರಿಕಾಕರ್ತರು ಬಹಳ ರೇಗಿದರು.

ಅಲ್ಲಿಂದ ರವೀಂದ್ರನು ಜರ್ಮನಿ, ಬಾಲ್ಕನ್ ರಾಷ್ಟ್ರಗಳಿಗೆ ತೆರಳಿದನು. ಅಲ್ಲಿಯ ಜನರ ಪ್ರೇಮಾದರಗಳು ಆತನನ್ನು ಮುಗ್ಧಗೊಳಿಸಿದುವು. 1930ರಲ್ಲಿ ರಷ್ಯಾಕ್ಕೆ ಹೋದನು. ಹತ್ತು ವರ್ಷಗಳಲ್ಲುಂಟಾದ ಅಲ್ಲಿಯ ಅಭಿವೃದ್ಧಿಯನ್ನು ಕಂಡು ಬೆರಗಾದನು. ತಾನು ಅಲ್ಲಿ ಕಂಡುದನ್ನೆಲ್ಲ ಭಾರತದಲ್ಲಿದ್ದ ತನ್ನ ಮಿತ್ರರಿಗೆ ವಿವರವಾಗಿ ಬರೆದನು. ಆ ಪತ್ರಗಳೇ ಮುಂದೆ 'ರಷ್ಯಾದ ಪತ್ರಗಳು' ಎಂಬ ಹೆಸರಿನಲ್ಲಿ ಪ್ರಕಟವಾಯಿತು. ರಷ್ಯವು ಆರೋಗ್ಯ, ವಿದ್ಯೆ ಮುಂತಾದವುಗಳಲ್ಲಿ ಅದ್ಭುತ ಪ್ರಗತಿ ಹೊಂದಿತ್ತು. ಬಾಲಬಾಲಿಕೆಯರಿಗೆ ವಿದ್ಯೆ, ಉದ್ಯೋಗಗಳಲ್ಲಿ ಸಮಾನಾವಕಾಶಗಳಿದ್ದುವು. ಆದರೆ ಒಂದು ವಿಷಯವು ಮಾತ್ರ ರವೀಂದ್ರನಿಗೆ ರುಚಿಸಲಿಲ್ಲ. ಅಲ್ಲಿನ ಸಾಮ್ಯವಾದಿಗಳ ಕುರಿತು ವಿರುದ್ಧಾಭಿ

ಪ್ರಾಯವನ್ನು ಯಾರಿಗೂ ಪ್ರದರ್ಶಿಸಲು ಸಾಧ್ಯವಿರಲಿಲ್ಲ. ಇದು ಬಹಳ ಅನ್ಯಾಯವೆಂದು ರವೀಂದ್ರನು ಭಾವಿಸಿದನು. ಬಲಾತ್ಕಾರದಿಂದ ಪ್ರಜಾಭಿ ಪ್ರಾಯವನ್ನು ಅಣಗಿಸುವುದು ಆತನಿಗೆ ಇಷ್ಟವಿರಲಿಲ್ಲ. ಈ ಕುರಿತು ರಷ್ಯದಲ್ಲಿದ್ದ ತನ್ನ ಮಿತ್ರರಿಗೆ ಹೀಗೆ ಬರೆದನು:—'ಜನಸಾಮಾನ್ಯರನ್ನು ವಿದ್ಯಾವಂತರನ್ನಾಗಿ ಮಾಡುವ ನಿಮ್ಮ ಪ್ರಯತ್ನವು ಪ್ರಶಂಸನೀಯವೇ ಸರಿ. ಪ್ರಜೆಗಳೆಲ್ಲ ವಿದ್ಯಾವಂತ ರಾದರೆ ಮಾತ್ರ ಸಾಮಾಜಿಕ ದುರಾಚಾರಗಳನ್ನು ನಾಶಗೊಳಿಸಬಹುದೆಂಬು ದನ್ನು ನೀವು ಅರಿತಿರುವಿರಿ. ಆದರೆ ನಿಮ್ಮ ಅಭಿಪ್ರಾಯಗಳನ್ನು ವಿರೋಧಿಸುವ ವರನ್ನು ನೀವು ದ್ವೇಷಿಸುವಿರಿ. ಇದು ಸರಿಯೇ? ನೀವು ಒಂದು ಘನೋದ್ದೇಶ ಕ್ಕಾಗಿ ದುಡಿಯುತ್ತಿರುವಿರಿ. ಅದಕ್ಕನುಸಾರವಾಗಿ ನಿಮ್ಮ ಮನಸ್ಸು, ನಿಮ್ಮ ದಯೆ, ನಿಮ್ಮ ಸಹಾನುಭೂತಿ, ನಿಮ್ಮ ತಾಳ್ಮೆಗಳೂ ಉದಾತ್ತವಾಗಬೇಕು.'

ರವೀಂದ್ರನು ಆಸ್ಟ್ರೇಲಿಯಾ ನ್ಯೂಜೀಲಾಂಡ್‌ಗಳನ್ನು ಸಂದರ್ಶಿಸಲಿಲ್ಲ. ಈಜಿಪ್ಟನ್ನು ಹೊರತು ಆಫ್ರಿಕದ ಇತರ ಪ್ರದೇಶಗಳನ್ನೂ ಕಾಣಲಿಲ್ಲ. ಪ್ರಪಂಚದ ಉಳಿದ ನಾಗರಿಕ ರಾಷ್ಟ್ರಗಳನ್ನೆಲ್ಲ ಸಂಚರಿಸಿದನು. 'ರವಿ' ಎಂಬ ತನ್ನ ಹೆಸರಿ ನಲ್ಲಿ ಆತನಿಗೆ ವಿಶೇಷ ಪ್ರೀತಿ. ಸೂರ್ಯನಂತೆ ತಾನೂ ಸಮಸ್ತ ಲೋಕಗಳಿಗೂ ಸೇರಿದವನೆಂಬುದು ಆತನ ಅಭಿಪ್ರಾಯ. ರವೀಂದ್ರನ ಎಂಬತ್ತನೆಯ ಜನ್ಮ ದಿನೋತ್ಸವದಂದು ತ್ರಿಪುರಾ ಮಹಾರಾಜನು 'ಭಾರತ ಭಾಸ್ಕರ'ನೆಂಬ ಬಿರುದ ನ್ನಿತ್ತು ಗೌರವಿಸಿದನು. ಈ ಗೌರವವೇನೋ ಯೋಗ್ಯವೇ. ಆದರೂ ಹೀಗೆ ಕರೆಯುವುದಕ್ಕಿಂತಲೂ 'ವಿಶ್ವಭಾಸ್ಕರ'ನೆಂದು ಕರೆಯುವುದೇ ಸಮಂಜಸ. ಪ್ರಪಂಚದ ಮೂಲೆಮೂಲೆಗಳಲ್ಲಿಯೂ ಆತನಿಗೆ ಮಿತ್ರರೆಷ್ಟೋ ಮಂದಿ ಇರುವರು. ಈ ಕಾರಣದಿಂದಲೇ ರವೀಂದ್ರನು ವಿಶ್ವಕುಟುಂಬಿಯಾದನು.

## ಅಧ್ಯಾಯ ೧೫.

## ರವೀಂದ್ರನ ಅಂತಿಮ ದಿನಗಳು.

**1931**ರಲ್ಲಿ ರವೀಂದ್ರನಾಥನಿಗೆ ಎಪ್ಪತ್ತು ವರ್ಷಗಳು ತುಂಬಿದುವು. ಈ ಉತ್ಸವವು ಶಾಂತಿನಿಕೇತನದಲ್ಲಿ ಮಾತ್ರವಲ್ಲದೆ ಭಾರತಾದ್ಯಂತ ಆಚರಿಸಲಾ ಯಿತು. ಕಲ್ಕತ್ತಾದಲ್ಲಿ ಈ ಉತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಲು ಪ್ರತ್ಯೇಕ ಸಂಘವನ್ನು ರಚಿಸಲಾಯಿತು. ದಶಂಬರ ಕೊನೆಯ ವಾರದಲ್ಲಿ ಈ ವಿಶೇಷೋತ್ಸವವನ್ನು ಆಚರಿಸಬೇಕೆಂದು ನಿಶ್ಚೈಸಲಾಯಿತು. ಆತನನ್ನು ಪ್ರಶಂಸಿಸಿ ಆತನ ಪ್ರಶಂಸಾರೂಪವಾದ ಲೇಖನಗಳನ್ನು ಪ್ರಸಿದ್ಧ ವಿದ್ವಾಂಸರನೇಕರು ಠಾಗೋ



ರವೀಂದ್ರನು ವೃದ್ಧಾಪ್ಯದಲ್ಲಿ

ರನ ಸುವರ್ಣಗ್ರಂಥವೆಂಬ ಹೆಸರಿನಿಂದ ಮುದ್ರಿಸಿ ನಗರ ಸಭಾಭವನದಲ್ಲಿ ನೆರೆದ ಮಹಾಸಭೆಯಲ್ಲಿ ರವೀಂದ್ರನಿಗೆ ಅರ್ಪಿಸಿದರು. ಆತನ ನಾಟಕಗಳಲ್ಲಿ ಕೆಲವನ್ನು ಪ್ರದರ್ಶಿಸಿದರು.

ಈ ಉತ್ಸವವು ಜರಗುತಿದ್ದಾಗಲೇ ಜನವರಿಯಲ್ಲಿ ಮಹಾತ್ಮಾಗಾಂಧಿಗೆ ಸೆರೆಮನೆಯು ಪ್ರಾಪ್ತವಾದ ವಾರ್ತೆ ಬಂದಿತು. ಆದುದರಿಂದ ಉತ್ಸವವು ಅಷ್ಟ ರಲ್ಲೇ ಕೊನೆಗೊಂಡಿತು. ಮಹಾತ್ಮನನ್ನು ಬಂಧಿಸಿದುದಕ್ಕಾಗಿ ರವೀಂದ್ರನು ಬಹಳ ಸಂಕಟಗೊಂಡನು. ಆಗಲೂ ಕೂಡ ಆತನು ಬ್ರಿಟಿಷರನ್ನು ನಿಂದಿಸಲಿಲ್ಲ. ದ್ವೇಷಾಸೂಯೆಗಳನ್ನು, ಪ್ರೋತ್ಸಾಹಿಸುವುದರಿಂದ ಲಾಭವಿಲ್ಲೆಂದು ಆತನು ಭಾವಿಸಿದನು. ಆದರೆ ಲಂಡನಿನ ಟ್ಯಾಮ್ಸ್ ಪತ್ರಿಕೆಗೆ ಒಂದು ಲೇಖನವನ್ನು ಬರೆದನು. ಎರಡು ದೇಶದವರೂ ಹಿಂದಿನದನ್ನೆಲ್ಲಾ ಮರೆತು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಒಂದು ನೂತನ ಮಾರ್ಗವನ್ನು ಅನುಸರಿಸತಕ್ಕದ್ದೆಂದು ಉದ್ಬೋಧಿಸಿದನು. ಆದರೆ ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಮಾತ್ರ ವಲ್ಲ, ಇತ್ತಂಡದವರೂ ಆತನನ್ನು ಅಪಾರ್ಥಮಾಡಿಕೊಂಡರು. ಅವನ ಶಾಂತಿ ಪ್ರಯತ್ನವು ನಿಷ್ಫಲವಾಯಿತು.

ಈ ಘಟನೆ ನಡೆದ ಅಲ್ಪಾವಕಾಶದಲ್ಲೇ ಎರವಾಡಾ ಜೈಲಿನಲ್ಲಿ ಜಾತೀಯ ಘೋಷಣೆ ನಡೆದ ಸಂದರ್ಭದಲ್ಲಿ ಮಹಾತ್ಮನು ಇದನ್ನು ಪ್ರತಿಭಟಿಸಿ ನಿರಶನವ್ರತ ವನ್ನು ಆರಂಭಿಸಿದನು. ರವೀಂದ್ರನು ಇದನ್ನರಿತು ಬಹಳ ಚಿಂತೆಗೊಳಗಾದನು. ಆದರೆ ನಿಜವಾದ ಜಾತೀಯ ಐಕ್ಯತೆಗಾಗಿ ಆತ್ಮತ್ಯಾಗವನ್ನು ಮಾಡುವುದು ಮಹತ್ವವಾದುದೆಂದರಿತು ರವೀಂದ್ರನು ಇದಕ್ಕೆ ಸಮ್ಮತಿಸಿದನು. ಮಹಾತ್ಮನು ವ್ರತವನ್ನು ಕೊನೆಗೊಳಿಸುವ ಕಾಲದಲ್ಲಿ ಆತನನ್ನು ಸಂಧಿಸಲು ರವೀಂದ್ರನು ಪೂನಾದ ಸೆರೆಮನೆಗೆ ಪ್ರಯಾಣ ಬೆಳೆಸಿದನು.

ಕೊನೆಯ ದಿನಗಳಲ್ಲಿ ರಾಜಕೀಯ ವಿಚಾರಗಳಲ್ಲಿ ಮಾತ್ರವಲ್ಲದೆ ಇತರ ವಿಷಯಗಳಲ್ಲಿಯೂ ರವೀಂದ್ರನು ಒಂಟಿಯಾಗಿಯೇ ಇದ್ದನು. ಒಬ್ಬರ ಮೇಲೊಬ್ಬರಾಗಿ ಆತನ ಅಣ್ಣಂದಿರೂ ಅಕ್ಕಂದಿರೂ ಮಡಿದರು. ಒಬ್ಬಳು ಮಾತ್ರ ಉಳಿದಳು. ಆತನ ಪತ್ನಿಯೂ ಮೂವರು ಮಕ್ಕಳೂ ಈ ಮೊದಲೇ ತೀರಿ ಕೊಂಡಿದ್ದರು. ಉಳಿದ ಒಬ್ಬ ಮಗನನ್ನೂ ಮಗಳನ್ನೂ ಇಬ್ಬರು ಮೊಮ್ಮಕ್ಕ ಳನ್ನೂ ಬಹಳವಾಗಿ ಪ್ರೀತಿಸುತ್ತಿದ್ದನು. ಮೊಮ್ಮಗನು ಬೆಳೆದು ದೊಡ್ಡವನಾ ದಾಗ ಆತನನ್ನು ವಿದ್ಯಾಭ್ಯಾಸಕ್ಕಾಗಿ ಜರ್ಮನಿಗೆ ಕಳುಹಿದನು. 1932ರಲ್ಲಿ ಕೇವಲ ಇಪ್ಪತ್ತೊಂದು ವರ್ಷದ ಆ ತರುಣನು ಜರ್ಮನಿಯಲ್ಲಿ ತೀರಿಕೊಂಡನು. ಕೆಲವು ವರ್ಷಗಳ ಹಿಂದೆಯೇ ರವೀಂದ್ರನ ಆಪ್ತಮಿತ್ರನಾಗಿದ್ದ ಪಿಯರ್ಸನ್‌ನು

ಇಟಲಿಯಲ್ಲಿ ರೈಲಿನ ಅಪಘಡಕ್ಕೆ ತುತ್ತಾಗಿ ಸತ್ತಿದ್ದನು. 1935ರಲ್ಲಿ ರವೀಂದ್ರ ಅಳಿಯನಾದ ದಿನೇಂದ್ರನೂ ಮೃತಪಟ್ಟನು. ಈತನು ರವೀಂದ್ರನ ಗೀತಗ ನಿಧಿಯಾಗಿದ್ದನು. ಉಳಿದವರೆಂದರೆ ಅಂಡ್ರೂಸನೂ ಇನ್ನು ಕೆಲವು ಆತ್ಮೀಂ ಗೆಳೆಯರು ಮಾತ್ರವೇ!

ವೃದ್ಧಾಪ್ಯದಲ್ಲಿ ರವೀಂದ್ರನ ಕುರಿತು ಪ್ರತಿ ದಿನವೂ ಸಾರ್ವಜನಿ ಸಮ್ಮೇಳನವು ನಡೆಯುತಿತ್ತು. ಎಲ್ಲರೂ ಆತನನ್ನು ಹಲವು ಪ್ರಕಾರವಾ ಗೌರವಿಸುತಿದ್ದರು. ಚೈತನ್ಯವಿರುವಷ್ಟು ಕಾಲವೂ ರವೀಂದ್ರನು ಸಭೆಗಳ ತನ್ನ ಆದರ್ಶಗಳಾದ ಶಾಂತಿ, ಜನಾಂಗ ಪ್ರೇಮ, ಸ್ವಾತಂತ್ರ್ಯ ಸಾಹಸಗ ಕುರಿತು ಮಾತಾಡುತಿದ್ದನು. 1936ರಲ್ಲಿ ಬ್ರಸೆಲ್ಸ್‌ನಲ್ಲಿ ವಿಶ್ವಶಾಂತಿ ಸಮ್ಮೇ ನವು ಜರಗಿತು. ಸಮ್ಮೇಳದ ನಾಯಕರು ರವೀಂದ್ರನನ್ನು ಸಂದೇಶ ಕಳುಹಿಸ ವಂತೆ ಪ್ರಾರ್ಥಿಸಿಕೊಂಡರು. ಉತ್ತರ ರೂಪವಾಗಿ 'ಬಲಶಾಲಿಗಳು ದುರಾ ಯನ್ನು ದೂರೀಕರಿಸಿ ಬಲಹೀನರನ್ನು ಬಲಶಾಲಿಗಳನ್ನಾಗಿ ಮಾಡುವಲ್ಲಿ ವರೆ ಶಾಂತಿಯು ಲಭಿಸದು' ಎಂಬ ಸಂದೇಶವನ್ನು ಕಳುಹಿದನು. 1937ರ ಕಲ್ಕತ್ತಾ ವಿಶ್ವವಿದ್ಯಾಲಯದವರು ಪದವೀಧರರ ಸಮ್ಮೇಳನದಲ್ಲಿ ಮಾತನಾಡ ವಂತೆ ರವೀಂದ್ರನನ್ನು ಕೇಳಿಕೊಂಡರು. ವಿಶ್ವವಿದ್ಯಾಲಯದ ಚರಿತ್ರೆಯಲ್ಲಿ ಬಂಗಾ ಯಲ್ಲಿ ಮಾತನಾಡಿದುದು ಇದೇ ಮೊದಲು. ಯಾವ ಅಧಿಕಾರವೂ ಇಲ್ಲ ರವೀಂದ್ರನಂತಹ ವ್ಯಕ್ತಿ ಈ ಸಮ್ಮೇಳನದಲ್ಲಿ ಮಾತನಾಡಿದುದೂ ಇದೇ ಮೊದಲ

ಈ ವರ್ಷಗಳಲ್ಲೆಲ್ಲ ರವೀಂದ್ರನು ಹೊಸ ಹೊಸ ಗೀತಗಳನ್ನು ರಚಿಸ ತಿದ್ದನು. 1930ರಿಂದ ಜೊತೆಯಲ್ಲಿ ವರ್ಣಚಿತ್ರಗಳನ್ನೂ ಬರೆಯುತ್ತಿದ್ದನ ತನ್ನ ಎಪ್ಪತ್ತನೆಯ ವಯಸ್ಸಿನಲ್ಲಿ ಅತ್ಯುತ್ಸಾಹದಿಂದ ಇಂತಹ ಕಠಿಣ ಕೆಲಸವನ ಮಾಡುವ ವ್ಯಕ್ತಿ ಸಿಗುವುದು ದುರ್ಲಭ. ಆತನ ದೇಹವು ಕ್ಷೀಣವಾಗಿದ್ದರ ಮನಸ್ಸು ನಿತ್ಯಯೌವನವನ್ನು ಹೊಂದಿತ್ತು. 1930ರಲ್ಲಿ ಇಂಗ್ಲೆಂಡಿಗೆ ಹೋದಾ ತನ್ನ ಚಿತ್ರಪಟಗಳನ್ನು ಜೊತೆಯಲ್ಲಿ ಒಯ್ದು ಅಲ್ಲಿ ಪ್ರದರ್ಶಿಸಿದನು. ಇದೇ ರೀ ಯಲ್ಲಿ ಯುರೋಪಿನ ಮುಖ್ಯನಗರಗಳಲ್ಲಿಯೂ ಪ್ರದರ್ಶನವನ್ನೇರ್ಪಡಿಸಿದನ

ಆತನು ವರ್ಣಚಿತ್ರವನ್ನು ಬರೆಯುವುದಕ್ಕೆ ಆರಂಭಿಸಿದುದು ಒಂದ ಸೋಜಿಗದ ಕತೆ. ಕತೆ ಪದ್ಯಗಳನ್ನು ಬರೆಯುತ್ತಿರುವಾಗ ಅಲ್ಲಲ್ಲಿ ಕೆಲ ಪದಗಳನ್ನೂ ವಾಕ್ಯಗಳನ್ನೂ ಹೊಡೆದುಹಾಕುತ್ತಿದ್ದನು. ಆ ಮೇಲೆ ವಿನೋ ದಿಂದ ಹೊಡೆದುಹಾಕಿದ ಗೀಟುಗಳನ್ನು ಒಂದಕ್ಕೊಂದು ಜೋಡಿಸುತ್ತಾ ರಬ್ಬರಿಸ ಅಳಿಸುತ್ತಾ ಮಧ್ಯೆಮಧ್ಯೆ ಇನ್ನು ಕೆಲವು ಗೀಟುಗಳನ್ನು ಗೀಚುತ್ತಾ ಆಡಿಕೊಳ ತಿದ್ದನು. ಈ ರೀತಿಯಲ್ಲಿ ತಾನು ಹೊಡೆದು ಹಾಕಿದ ಗೀಟುಗಳಿಂದ ಹಕ್ಕಿಯೊ

ಮೃಗವೋ ವಿಮಾನೋ ರೂಪುಗೊಳ್ಳುತ್ತಿತ್ತು. ಹೀಗೆ ಆರಂಭಿಸಿ ಕೊನೆಯಲ್ಲಿ ಬೇರೆ ಬೇರೆ ದೃಶ್ಯಗಳನ್ನು ಚಿತ್ರಿಸಲು ತೊಡಗಿದನು. ಇದರ ಮಾದರಿಯೊಂದನ್ನು ಏಳನೆಯ ಅಧ್ಯಾಯದಲ್ಲಿ ನೋಡಬಹುದು. ಯುರೋಪಿನ ಚಿತ್ರಗಾರರು ಆತನ ಚಿತ್ರಗಳನ್ನು ಬಹಳ ಮೆಚ್ಚಿದರು.

ಕೊನೆಯ ದಿನಗಳಲ್ಲಿ ರವೀಂದ್ರನು ಹೆಚ್ಚಾಗಿ ಪ್ರಯಾಣಮಾಡಲಾರದೆ ಹೋದರೂ ಎಲ್ಲಾ ಚಟುವಟಿಕೆಗಳಲ್ಲಿಯೂ ಮೊದಲಿನಂತೆಯೇ ಭಾಗವಹಿಸು ತ್ತಿದ್ದನು. ವಿಶ್ವಭಾರತಿಯ ಅಂಗವಾಗಿ ತಾನು ಕಂಡ ಕನಸುಗಳೆರಡು ಫಲಿಸಿ ದುವು. 1937ರಲ್ಲಿ ಶಾಂತಿನಿಕೇತನದಲ್ಲಿ ಚೀನಾಮಂದಿರವೂ 1939ರಲ್ಲಿ ಹಿಂದೀಮಂದಿರವೂ ಸ್ಥಾಪಿತವಾದುವು. ಪಂಡಿತ ನೆಹರೂ ಈ ಮಂದಿರವನ್ನು ಉದ್ಘಾಟನೆಮಾಡಿದನು.

1937ರಲ್ಲಿ ರವೀಂದ್ರನು ಅಕಸ್ಮಾತ್ತಾಗಿ ಕಠಿಣ ಕಾಯಿಲೆಗೆ ತುತ್ತಾದನು. ಆದರೆ ಬೇಗನೆ ಗುಣಹೊಂದಿದನು. ಇದೇ ವರ್ಷ 'ವಿಶ್ವಪರಿಚಯ'ವೆಂಬ ಗ್ರಂಥವನ್ನು ಬಂಗಾಳಿ ಭಾಷೆಯಲ್ಲಿ ಬರೆದನು. ಇದರಲ್ಲಿ ವೈಜ್ಞಾನಿಕ ವಿಷ ಯಗಳು ಪ್ರತಿಪಾದಿತವಾಗಿವೆ. 1938ರಲ್ಲಿ ಒಂದು ಹಾಸ್ಯಪೂರ್ಣ ನಾಟಕ ವನ್ನು ಬರೆದನು. ಈ ಮೊದಲೇ ಬರೆದ 'ಚಂಡಾಲಿಕಾ' ನಾಟಕಕ್ಕೆ ಹಾಡು ಗಳನ್ನು ರಚಿಸಿದನು. 'ವಂಗಭಾಷಾಪರಿಚಯ'ವೆಂಬ ಗ್ರಂಥವನ್ನು ಸರಳ ಶೈಲಿಯಲ್ಲಿ ಬರೆದನು. 1939ರಲ್ಲಿ ರವೀಂದ್ರನು ಈಶ್ವರಚಂದ್ರವಿದ್ಯಾಸಾಗರನ ಶತಮಾನೋತ್ಸವಕ್ಕೆ ಮಿಡ್ನಾಪುರಕ್ಕೆ ಹೋದನು. ವಿದ್ಯಾಸಾಗರನು ಆಧುನಿಕ ಬಂಗಾಳಿಗದ್ಯದ ನಿರ್ಮಾತೃ. ರವೀಂದ್ರನು ನವತರುಣ ಬರೆಹಗಾರರನ್ನು ಸರಳ ಶೈಲಿಯಲ್ಲಿ ಬರೆಯುವಂತೆ ಪ್ರೋತ್ಸಾಹಿಸಿದನು.

1939ರಲ್ಲಿ ಅಂಡ್ರೂಸನು ಮರಳಿ ಶಾಂತಿನಿಕೇತನವನ್ನು ಸೇರಿದನು. ರವೀಂದ್ರನು ಮಿತ್ರನ ಆಗಮನದಿಂದ ಬಹಳ ಸಂತೋಷಗೊಂಡನು. ಆದರೆ ಒಂದು ತಿಂಗಳಲ್ಲೇ ಅಂಡ್ರೂಸನು ಕಾಯಿಲೆ ಬಿದ್ದು ಕಲ್ಕತ್ತದಲ್ಲಿ ಚಿಕಿತ್ಸೆ ಹೊಂದುತ್ತಿರುವಾಗ 1940ರಲ್ಲಿ ಮೃತಪಟ್ಟನು. ಈ ವರ್ಷವೆಲ್ಲ ರವೀಂದ್ರನು ಕಷ್ಟದಿಂದ ಕಳೆಯಬೇಕಾಯಿತು. ಯುರೋಪಿನಲ್ಲಿ ಯುದ್ಧವು ಪ್ರಾರಂಭ ವಾಗಿ ಡೆನ್ಮಾರ್ಕ್, ನೋರ್ವೆ, ಫ್ರಾನ್ಸ್ ಮೊದಲಾದ ದೇಶಗಳ ಮೇಲೆ ದಂಡ ಯಾತ್ರೆಯು ಮೊದಲಾಯಿತು. ಈ ದೇಶಗಳಲ್ಲೆಲ್ಲ ರವೀಂದ್ರನಿಗೆ ಮಿತ್ರರಿದ್ದರು. ಅವರನ್ನೂ ಅಲ್ಲಿನ ಸಾಮಾನ್ಯ ಪ್ರಜೆಗಳ ಕಷ್ಟಗಳನ್ನೂ ಚಿಂತಿಸಿ ಕೊರಗು ತ್ತಿದ್ದನು. ಚೀನಾದಲ್ಲಿಯೂ ಪ್ರಜೆಗಳು ಯುದ್ಧದಿಂದ ಬಳಲುತ್ತಿದ್ದರು. ಈ ದುಃಖಗಳನ್ನೆಲ್ಲಾ ಮರೆಯುವುದಕ್ಕಾಗಿ ರವೀಂದ್ರನು ತನ್ನ ಬಾಲ್ಯದ ದಿನಗಳನ್ನು

ಸ್ಮರಿಸುತ್ತಾ ಕಾಲವನ್ನು ಕಳೆದನು. ಈ ಸಮಯದಲ್ಲೇ 'ನನ್ನ ಬಾಲ್ಯ'ವೆಂ
ಗ್ರಂಥವನ್ನು ಮನೋರಂಜಕವಾಗುವಂತೆ ರಚಿಸಿದನು.

1940ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದವರು ರವೀಂದ್ರನಿಗೆ 'ಡಾಕ್ಟ
ಆಫ್ ಲಿಟರೇಚರ್' ಪದವಿಯನ್ನಿತ್ತು ಗೌರವಿಸಿದರು. ಈ ಉತ್ಸವವು ಶಾಂ
ನಿಕೇತನದಲ್ಲಿ ಸರ್ ಮಾರಿಸ್ ಗ್ವಯರ್ ಮತ್ತು ಸರ್ವೆಪಲ್ಲಿ ರಾಧಾಕೃಷ್ಣ
ಇವರ ನೇತೃತ್ವದಲ್ಲಿ ಲಾಟಿನ್ ಭಾಷೆಯಲ್ಲಿ ಜರಗಿತು. ರವೀಂದ್ರನು ಸಂಸ್ಕೃ
ದಲ್ಲಿ ಉತ್ತರವಿತ್ತನು. ಈ ಪ್ರಕಾರವಾಗಿ ಪಾಶ್ಚಾತ್ಯ ಲಾಟಿನ್ ಭಾಷೆಯ
ಪೌರಸ್ತ್ಯ ಸಂಸ್ಕೃತಭಾಷೆಯೂ ವಿಶ್ವಭಾರತಿಯಲ್ಲಿ ಸಂಧಿಸಿದುವು. ಈ ಉ
ವವು ಪೂರ್ವಪಶ್ಚಿಮದೇಶಗಳ ಮೈತ್ರಿಯನ್ನು ಇನ್ನಷ್ಟು ಬಲಪಡಿಸುವಂತಾ
ತೆಂದು ರವೀಂದ್ರನು ಸಂತೋಷಗೊಂಡನು.

ಕೆಲವು ವಾರಗಳ ಅನಂತರ ಆತನು ಕಾಯಿಲೆಗೊಳಗಾದನು. ಕಲ್ಕ
ದಲ್ಲಿ ಬಹಳ ದಿನಗಳ ಚಿಕಿತ್ಸೆ ನಡೆದ ಮೇಲೆ ತುಸು ಗುಣ ಹೊಂದಿ ಶಾಂತಿನಿಕ
ತನಕ್ಕೆ ಬಂದನು. ಆದರೆ ವಿಶೇಷ ನಿತ್ರಾಣವಿದ್ದುದರಿಂದ ಬಹಳ ಕಾಲ ಹಾಸಿ
ಯನ್ನು ಬಿಟ್ಟೇಳಲಿಲ್ಲ. ಹಾಸಿಗೆಯಲ್ಲಿದ್ದಾಗಲೂ ಕತೆಕವನಗಳನ್ನು ಬರೆಯುತ್ತಲ
ಇದ್ದನು. ಲೇಖನಿಯನ್ನು ಹಿಡಿಯಲು ಅಶಕ್ತನಾದಾಗ ಬೇರೆಯವರಿಂದ ಬ
ಸಿದನು.

1940ರಲ್ಲಿ ರವೀಂದ್ರನ ಎಂಬತ್ತನೆಯ ವರ್ಧಂತಿ ಜರಗಿತು. ಮಿತ್ರರ
ವಿದ್ಯಾರ್ಥಿಗಳೂ ನೆರೆದ ಆ ಸಭೆಯಲ್ಲಿ ರವೀಂದ್ರನು ಸ್ವತಃ ಬರೆದ ಸಂದೇಶವನ
ಒಬ್ಬನು ಓದುವುದನ್ನು ಕೇಳಿ ಆನಂದಗೊಂಡನು. ಇದೇ ಅವನ ಕೊನೆ
ಸಂದೇಶವಾಯಿತು. ಈ ಸಂದೇಶವು 'ವಿಶ್ವಭಾರತಿ ಸಂಚಿಕೆ'ಯಲ್ಲಿ ಪ್ರಕ
ವಾಯಿತು. ಭಾರತದಲ್ಲೆಲ್ಲ ಈ ಜನ್ಮದಿನೋತ್ಸವವು ಕೊಂಡಾಡಲ್ಪಟ್ಟಿತ
ವಿಶ್ವದ ಎಲ್ಲ ಭಾಗಗಳಿಂದಲೂ ಶುಭಸಂದೇಶಗಳು ಬಂದುವು. 'ವಿಶ್ವಭಾರ
ರವೀಂದ್ರನ ಜನ್ಮದಿನದ ವಿಶೇಷ ಸಂಚಿಕೆಯನ್ನು ಹೊರಡಿಸಿತು. ಇದರಿಂ
ರವೀಂದ್ರನ ಜೀವನ ಹಾಗೂ ಕೃತಿಗಳ ಕುರಿತು ಸ್ವಾರಸ್ಯವಾದ ಎಷ್ಟೋ
ವಿಷಯಗಳನ್ನು ತಿಳಿಯಬಹುದು.

ಕ್ರಮೇಣ ರವೀಂದ್ರನ ಆರೋಗ್ಯವು ಕ್ಷೀಣಿಸತೊಡಗಿತು. ಆಗಾ
ಜ್ವರಬರತೊಡಗಿತು. 1941ರ ಜುಲೈ ತಿಂಗಳಲ್ಲಿ ಚಿಕಿತ್ಸೆಗಾಗಿ ಕಲ್ಕತ್ತ
ಹೋದನು. ಆಶ್ರಮ ನಿವಾಸಿಗಳೆಲ್ಲರೂ 'ಗೇಟಿನ' ತನಕ ಬಂದು ದುಃಖದಿಂ
ರವೀಂದ್ರನನ್ನು ಬೀಳ್ಕೊಟ್ಟರು. ರವೀಂದ್ರನು ಕುಳಿತ ವಾಹನವು ನಿಧಾನವಾ
ಹೋಗುತ್ತಿರುವಾಗ ಅವರೆಲ್ಲ ಶಾಂತಿನಿಕೇತನದ ಹಾಡನ್ನು ಹಾಡಿದರ

ಕಲ್ಕತ್ತದಲ್ಲಿ ರವೀಂದ್ರನನ್ನು ಬದುಕಿಸಲು ಮಾಡಿದ ಎಲ್ಲ ಪ್ರಯತ್ನಗಳೂ ನಿಷ್ಫಲವಾದುವು. ಜೊರಸಾಂಕೋದಲ್ಲಿ ತಾನು ಹುಟ್ಟಿದ ಮನೆಯಲ್ಲೇ 1941 ಆಗಸ್ಟ್ ಏಳರಂದು ರವೀಂದ್ರನು ದೈವಾಧೀನನಾದನು. ಆತನ ಭೌತಿಕ ದೇಹವು ಗಂಗಾನದಿಯ ದಂಡೆಯಲ್ಲಿರುವ ನಿಮ್‌ತೋಲಾಘಾಟ್‌ನಲ್ಲಿ ಸಂಧ್ಯಾಕಾಲದಲ್ಲಿ ದಹನಮಾಡಲಾಯಿತು.

ಎಲ್ಲರಂತೆ ತಾನೂ ಒಂದಲ್ಲೊಂದು ದಿನ ಮೃತ್ಯುವಿನ ದ್ವಾರವನ್ನು ಸೇರಲೇಬೇಕೆಂಬ ಭಾವನೆ ತನ್ನಲ್ಲಿ ಮೂಡಿದಾಗ ರವೀಂದ್ರನು ಬರೆದ ಗೀತವೊಂದರ ಭಾವಾನುವಾದ ಹೀಗಿದೆ:—

‘ಅಗಲಿಕೆಯ ಕಾಲದಲಿ ಶುಭವಾಗಲೆನಗೆಂದು
ಕೋರಿರೈ ಸ್ನೇಹಿತರಿರಾ !
ತುಂಬಿಹುದು ಆಗಸವು ಮುಂಜಾನೆ ಬೆಳಕಿನಲಿ
ಎನ್ನ ಮಾರ್ಗವು ಸುಂದರ.
ಏನನಾನಲ್ಲಿಗೊಯ್ಯುವೆನೆಂದು ಕೇಳದಿರಿ
ಪ್ರಾರಂಭಿಸುವೆ ಯಾತ್ರೆಯ.
ರಿಕ್ತಹಸ್ತಗಳಿಂದಲಾಶಾಹೃದಯದಿಂದ
ಸಾಗುವೆನು ನಾ ದಾರಿಯ.
ಎನ್ನ ಈ ಜೀವನವ ಪ್ರೀತಿಸುವೆ ನಾನೆಂತು
ಅಂತು ಪ್ರೇಮಿಪೆ ಮರಣವ.’

ರವೀಂದ್ರನು ರಚಿಸಿದ ‘ಅಂಚೆಮನೆ’ ನಾಟಕಾಂತ್ಯದಲ್ಲಿ ‘ಅಮಲ’ ಎಂಬ ಬಾಲಕನು ಮರಣಶಯ್ಯೆಯಲ್ಲಿದ್ದಾಗ ನಿರ್ಭಯನಾಗಿ ಪ್ರೇಮಪೂರ್ಣ ಗೀತವೊಂದನ್ನು ಹಾಡುವನು. ಆದರೆ ಈ ನಾಟಕವನ್ನು ಎಂದೂ ಪ್ರದರ್ಶಿಸಿರಲಿಲ್ಲ. ರವೀಂದ್ರನ ಕೋರಿಕೆಯಂತೆ, ಶಾಂತಿನಿಕೇತನದಲ್ಲಿ ಆತನ ಅಂತ್ಯಕ್ರಿಯೆಗಳು ನೆರವೇರುತ್ತಿದ್ದಾಗ ಈ ಗೀತವನ್ನು ಮೊದಲ ಬಾರಿಗೆ ಹಾಡಲಾಯಿತು. ಗೀತೆಯ ಭಾವ ಹೀಗಿದೆ:—

‘ಮುಂಗಡೆಯಲ್ಲಿದೊ ಪ್ರಶಾಂತಸಾಗರ
ಓ ನಾವಿಕ! ನಡೆಯಿಸು ಹರಿಗೋಲ.
ಐಹಿಕ ಬಂಧಗಳೆಲ್ಲವು ನಶಿಸಲಿ
ವಿಶಾಲ ವಿಶ್ವದೊಳೈಕ್ಯವನೈದಲಿ
ನಿರ್ಭಯ ಹೃದಯದೊಳರಿಯಲಿಯಾತನು
ಉದಾತ್ತ ಮೂರ್ತಿಯನವ್ಯಕ್ತನನು!’

